# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 122
2) ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
3) ಉತ್ತರಿಸಬೇಕಾದ ದಿನಾಂಕ : 12-09-2022
4) ಉತ್ತರಿಸಬೇಕಾದ ಸಚಿವರು : ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೀನುಗಾರಿಕೆ ವೃತ್ತಿಯನ್ನು ನಡೆಸಿಕೊಂಡು ಬಂದಿರುವ ಮೀನುಗಾರರ ಮೀನುಗಾರಿಕಾ ಬೋಟ್‌ಗಳಿಗೆ ಡೀಸೆಲ್ ಅನ್ನು ಮಾಸಿಕವಾಗಿ ನೀಡುವ ಬದಲು ವಾರ್ಷಿಕ ಕೋಟಾದಡಿ ನೀಡುವ ಕುರಿತು ಸರ್ಕಾರದ ನಿಲುವೇನು; | ಪ್ರಸ್ತುತ, ಯಾಂತ್ರೀಕೃತ ದೋಣಿಗಳಿಗೆ ಇಂಜಿನ್‌ನ ಹೆಚ್.ಪಿ.ಗನುಗುಣವಾಗಿ ಕೋಟಾ ನಿಗದಿಪಡಿಸಿ ಡೀಸೆಲ್‌ನ್ನು ಮಾಸಿಕವಾಗಿ ನೀಡುತಿದ್ದು FRIMS ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. ಡೀಸೆಲ್‌ನ್ನು ವಾರ್ಷಿಕ ಕೋಟಾದಡಿ ನೀಡಿದರೆ, ಹಣವುಳ್ಳವರು ಶೀಘ್ರವಾಗಿ ಡೀಸೆಲ್ ಖರೀದಿಸಿ ನಂತರ ತಡವಾಗಿ ಮೀನುಗಾರಿಕೆ ಮಾಡುವ ಸಣ್ಣ ಯಾಂತ್ರಿಕ ದೋಣಿಗಳಿಗೆ ಕರರಹಿತ ಡೀಸೆಲ್ ಸಿಗದೆ ವಂಚಿತರಾಗುತ್ತಾರೆ. ಆದುದರಿಂದ ವಾರ್ಷಿಕ ಕೋಟಾ ಬದಲು ಎಲ್ಲರಿಗೂ ಸಮತೋಲನದಲ್ಲಿ ಡೀಸೆಲ್ ಸಿಗುವಂತಾಗುವ ಸದುದ್ದೇಶದ ದೃಷ್ಟಿಯಿಂದ ಮಾಸಿಕ ಕೋಟಾ ನಿಗದಿಪಡಿಸಿ ನೀಡಲಾಗುತ್ತಿದೆ. |
| ಆ) | ಮೀನುಗಾರರಿಗೆ ಮಾಸಿಕವಾಗಿ ನೀಡುವ ಡೀಸಲ್ 300 ಲೀಟರ್ ಬದಲಿಗೆ 400 ಲೀಟರ್ ಅನ್ನು ನೀಡುವ ಬಗ್ಗೆ ಪ್ರಸ್ತಾಪಿತವಾಗಿದ್ದು, 400 ಲೀಟರ್ ಡೀಸಲ್ ಅನ್ನು ನೀಡುವಲ್ಲಿ ಸರ್ಕಾರಕ್ಕೆ ಇರುವ ತಾಂತ್ರಿಕ ತೊಡಕು ಗಳೇನು? (ವಿವರ ನೀಡುವುದು) | ಮೀನುಗಾರಿಕೆ ದೋಣಿಗಳಿಗೆ ಪ್ರಸ್ತುತ ಇಂಜಿನ್ ಸಾಮರ್ಥ್ಯಕ್ಕನುಗುಣವಾಗಿ ದಿನ ಒಂದಕ್ಕೆ ಗರಿಷ್ಟ 300 ಲೀ. ನಂತೆ ಮಾಸಿಕ 9000 ಲೀ. ಕರರಹಿತ ಡೀಸೆಲ್‌ನ್ನು ಪೂರೈಸಲಾಗುತ್ತಿದೆ. ಮೀನುಗಾರಿಕೆ ದೋಣಿಗಳ ಮಾಲೀಕರಿಂದ ದಿನ ಒಂದಕ್ಕೆ ನೀಡುತ್ತಿರುವ 300 ಲೀಟರ್ ಡೀಸೆಲ್‌ನ್ನು 400 ಲೀಟರ್‌ಗೆ ಹೆಚ್ಚಿಸಲು ಹಲವಾರು ವರ್ಷಗಳಿಂದ ಬೇಡಿಕೆ ಇರುತ್ತದೆ. ದೋಣಿ ಮಾಲೀಕರ ಬೇಡಿಕೆಯಂತೆ ಪ್ರಸ್ತುತವಿರುವ 300 ಲೀಟರ್ ಮಿತಿಯನ್ನು 400 ಲೀಟರ್‌ಗೆ ಹೆಚ್ಚಿಸುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |

ಸಂಖ್ಯೆ: ಪಸಂಮೀ ಇ-186 ಮೀಇಯೋ 2022

(ಎಸ್. ಅಂಗಾರ)
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್.ಕೆ (ಉಡುಪಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **123** |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ವಿವಿಧ ವಸತಿ ಯೋಜನೆಯಡಿ ಮನೆ ಹಂಚಿಕೆಯಾಗಿ, ಮನೆ ನಿರ್ಮಾಣದ ಕಾರ್ಯದ ಪ್ರಗತಿಯನ್ನು ರಾಜೀವ್ ಗಾಂಧಿ ನಿಗಮದ ವೆಬ್‌ಸೈಟ್‌ನಲ್ಲಿ ಇಂಧೀಕರಿಸಿದರೂ ಫಲಾನುಭವಿಗಳ ಖಾತೆಗೆ ಹಣದ ಮೊತ್ತ ಜಮಾ ಮಾಡದೇ ಇರಲು ಕಾರಣಗಳೇನು ; | ವಿವಿಧ ವಸತಿ ಯೋಜನೆಗಳಡಿ ನಿರ್ಮಿಸುವ ಮನೆಗಳ ಪ್ರಗತಿಯನ್ನು ಆಶ್ರಯ-ವಿಜಿಲ್ ಇಂದಿರಾ ಮನೆ ಆ್ಯಪ್ ನಲ್ಲಿ ಜಿ.ಪಿ.ಎಸ್ ಆಧಾರಿತ ಛಾಯಚಿತ್ರಗಳ ಮೂಲಕ ತೆಗೆದು ಪರಿಶೀಲಿಸಿ ನಂತರ ಆಧಾರ್ ಜೋಡಣೆಯಾದ ಅರ್ಹ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಕೇಂದ್ರ ಸರ್ಕಾರದ ವಸತಿ ಯೋಜನೆಗಳನ್ನು ಹೊರತುಪಡಿಸಿ ಆಧಾರ್ ಜೋಡಣೆಯಾದ ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲು ಬಾಕಿ ಇರುವುದಿಲ್ಲ. |
| ಆ) | ಪ್ರಧಾನ ಮಂತ್ರಿ ಆವಾಸ್ ಯೋಜನೆ, ಬಸವ ವಸತಿ ಯೋಜನೆ, ಅಂಬೇಡ್ಕರ್ ವಸತಿ ಯೋಜನೆ, ನಗರ ವಾಜಪೇಯಿ ವಸತಿ ಯೋಜನೆಯಡಿಯಲ್ಲಿ ಉಡುಪಿ ನಗರ ಸೇರಿದಂತೆ ಉಡುಪಿ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಹಂಚಿಕೆಯಾದ ಮನೆಗಳು ಎಷ್ಟು ; ಹಂಚಿಕೆಯಾದ ಮನೆಗಳಲ್ಲಿ ಎಷ್ಟು ಫಲಾನುಭವಿಗಳಿಗೆ ಪೂರ್ಣ ಪ್ರಮಾಣದ ಹಣದ ಮೊತ್ತ ಜಮಾ ಆಗಿದೆ; ಹಣ ಜಮಾ ಆಗದೇ ಇರುವ ಫಲಾನುಭವಿಗಳು ಎಷ್ಟು ; (ಹೆಸರು ಸಹಿತ ಸಂಪೂರ್ಣ ವಿವರಗಳನ್ನು ಒದಗಿಸುವುದು) | ಉಡುಪಿ ನಗರ ಸೇರಿದಂತೆ ಉಡುಪಿ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಹಂಚಿಕೆಯಾದ ವಿವರ ಯೋಜನಾವಾರು ವಿವರ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ ನೋಡಿ) ಫಲಾನುಭವಿವಾರು ವಿವರವನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ.<br><br>ಉಡುಪಿ ನಗರ ಸೇರಿದಂತೆ ಉಡುಪಿ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಹಂಚಿಕೆಯಾದ ಮನೆ ಪೂರ್ಣಗೊಳಿಸಿದ 26 ಫಲಾನುಭವಿಗಳಿಗೆ ಪೂರ್ಣ ಪ್ರಮಾಣದ ಮೊತ್ತ ರೂ.37.40 ಲಕ್ಷಗಳು ಬಿಡುಗಡೆ ಆಗಿದೆ. ಹಂಚಿಕೆಯಾದ ಮನೆಗಳಲ್ಲಿ ಮನೆ ಪೂರ್ಣಗೊಳಿಸದ 9 ಫಲಾನುಭವಿಗಳಿಗೆ ಪೂರ್ಣ ಪ್ರಮಾಣದ ಮೊತ್ತ ಜಮೆ ಆಗಲು ರೂ.8.92 ಲಕ್ಷ ಬಾಕಿ ಇದ್ದು, ವಿವರ ಅನುಬಂಧ-2 ರಲ್ಲಿ ಒದಗಿಸಲಾಗಿದೆ. |

| ಯೋಜನೆಯ ಹೆಸರು | ಹಂಚಿಕೆ ಯಾದ ಮನೆಗಳು |
|---|---|
| ಪಿ.ಎಂ.ಎ.ವೈ (ನಗರ)-ಬಿ.ಎಲ್.ಸಿ Non convergence | 245 |
| ಪಿ.ಎಂ.ಎ.ವೈ (ನಗರ)- ಎ.ಎಚ್.ಪಿ | 900 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 2 |
| ಬಸವ ವಸತಿ ಯೋಜನೆ | 317 |
| ಅಂಬೇಡ್ಕರ್ ವಸತಿ (ಗ್ರಾ)ಯೋಜನೆ, | 84 |
| ವಾಜಪೇಯಿ ವಸತಿ ಯೋಜನೆ | 31 |
| ಅಂಬೇಡ್ಕರ್ ವಸತಿ ಯೋಜನೆ (ನ) | 18 |
| **ಒಟ್ಟು** | **1597** |

| | | |
|---|---|---|
| | | * ಪಿ.ಎಂ.ಎ.ವೈ (ನಗರ)- ಎ.ಎಚ್.ಪಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಸಂಬಂದಿಸಿದ 900 ಮನೆಗಳಿಗೆ ಕೇಂದ್ರ ಸರ್ಕಾರದಿಂದ ರೂ.300.00 ಲಕ್ಷ, ಡಾ.ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ನಗರ)ದಡಿ ರೂ.87.11 ಲಕ್ಷ ಹಾಗೂ ವಾಜಪೇಯಿ ವಸತಿ ಯೋಜನೆಯಡಿ ರೂ.304.31 ಲಕ್ಷಗಳು ಒಟ್ಟು ರೂ.691.41 ಲಕ್ಷಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲಾಗಿದೆ. |
| ಇ) | ಉಡುಪಿ ನಗರ ಸಭಾ ವ್ಯಾಪ್ತಿಯ ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿಯಲ್ಲಿ 106 ಪ್ರಕರಣಗಳಲ್ಲಿ ಹಾಗೂ ಅಂಬೇಡ್ಕರ್ ವಸತಿ ಯೋಜನೆಯಡಿಯಲ್ಲಿ 2015-16 ರಿಂದ 2016-17 ರವರೆಗೆ 15 ಪ್ರಕರಣಗಳಲ್ಲಿ ಮನೆಗಳ ಪ್ರಗತಿ ಹಂತ ಪೂರ್ಣಗೊಂಡು ಜಿ.ಪಿ.ಎಸ್ ಮುಖೇನ ನಿಗಮದ ವೆಬ್‌ಸೈಟ್‌ನಲ್ಲಿ ಇಂಧೀಕರಿಸಿದರೂ ಫಲಾನುಭವಿಗಳ ಖಾತೆಗೆ ಹಣದ ಮೊತ್ತ ಜಮಾ ಆಗದೆ, ಫಲಾನುಭವಿಗಳು ಸಂಕಷ್ಟಕ್ಕೊಳಗಾಗಿರುವುದನ್ನು ಗಂಭೀರವಾಗಿ ಪರಿಗಣಿಸದೆ ಇರಲು ಕಾರಣಗಳೇನು ? | ಕೇಂದ್ರ ಸರ್ಕಾರವು ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ)ಯಡಿ ಹೊಸ ಆಯವ್ಯಯ ಶೀರ್ಷಿಕೆ ಸೃಜಿಸುವ ಕಾರಣದಿಂದಾಗಿ ಕಳೆದ 7 ತಿಂಗಳಿನಿಂದ (ಫೆಬ್ರುವರಿ-2022 ರಿಂದ) ಯಾವುದೇ ಅನುದಾನ ಬಿಡುಗಡೆ ಮಾಡಿರುವುದಿಲ್ಲ. |

ಸಂಖ್ಯೆ :ವಇ 352 ಹೆಚ್ಎಎಂ 2022

**(ವಿ. ಸೋಮಣ್ಣ)**
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

PMAY(U) Annexure-1

PMAY(U) AHP Udupi Constituency Progress

| Sl.No | Year | District | IA | Constituency | Approved DU's | Completed | Foundation | Lintel | Roof | Under Progress | Unstarted |
|---|---|---|---|---|---|---|---|---|---|---|---|
| 1 | 2017-18 | Udupi | KSDB(83119) | Udupi | 500 | 280 | 110 | 10 | 0 | 120 | 100 |
| 2 | 2021-22 | Udupi | KSDB | Udupi | 400 | 0 | 0 | 0 | 0 | 0 | 400 |
| Total | | | | | 900 | 280 | 110 | 10 | 0 | 120 | 500 |

PMAY(U) BLC projects approved Data

| SL. No | District Name | City Name | Constituency | IA | Year | Approved | Unstarted | Foundation | Lintel | Roof | Completed |
|---|---|---|---|---|---|---|---|---|---|---|---|
| | | | | | | | | | | | |
| 1 | Udupi | Udupi | Udupi | ULB - GOI | 2019-20 | 154 | 72 | 14 | 9 | 8 | 51 |
| 2 | Udupi | Udupi | Udupi | ULB - GOI | 2019-20 | 35 | 13 | 1 | 2 | 1 | 18 |
| 3 | Udupi | Udupi | Udupi | ULB - GOI | 2020-21 | 15 | 8 | 2 | 1 | 0 | 4 |
| 4 | Udupi | Udupi | Udupi | ULB - GOI | 2021-22 | 41 | 12 | 1 | 3 | 3 | 22 |
| **Grand Total** | | | | | | **245** | **105** | **18** | **15** | **12** | **95** |

## Beneficary wise releases pending data

| Sl.No. | District_Name | City_Name | Name | Father_Name | Beneficiary_Code | Fund released |
|---|---|---|---|---|---|---|
| 1 | Udupi | Udupi | Asha | Sadashiva Anchan | 298031411791700033" | 0 |
| 2 | Udupi | Udupi | Usha S Jogi | Sathish R Jogi | "298031411794400002" | 0 |
| 3 | Udupi | Udupi | Gowri | Ranga C | "298031411793500013" | 0 |
| 4 | Udupi | Udupi | SHANTHA | Baggugu | "298031411791200028" | 0 |
| 5 | Udupi | Udupi | ANITHA | DINESH BANGERA | "298031411791500064" | 0 |
| 6 | Udupi | Udupi | BABY YANE SUMA | Ramachandra Naik | "298031411792500006" | 0 |
| 7 | Udupi | Udupi | Deepika | Dayananda Prabhu | "298031411694000037" | 0 |
| 8 | Udupi | Udupi | GULABI | RAMESH | "298031411791400012" | 0 |
| 9 | Udupi | Udupi | Gurulingamma | Mahanthesh | "298031411794600012" | 0 |
| 10 | Udupi | Udupi | Hanumavva | Laxman | "298031411794600013" | 0 |
| 11 | Udupi | Udupi | INDIRA | DAYANANDA NAIK | "298031411695700010" | 0 |
| 12 | Udupi | Udupi | KRISHNA NAIK | ANNU NAIK | "298031411695700009" | 0 |
| 13 | Udupi | Udupi | KUSUMA | Manjunath Naik | "298031411792700017" | 0 |
| 14 | Udupi | Udupi | LALITHA | Gopala Acharya | 298031411793200031" | 0 |
| 15 | Udupi | Udupi | MANJULA | Manjunath Mogaveera | 298031411792800002" | 0 |
| 16 | Udupi | Udupi | Namitha Sunil | B Sunil Kumar | 298031411794400001" | 0 |
| 17 | Udupi | Udupi | Parvathi Ravi Karvi | Ravi Kharvi | "298031411791100015" | 0 |
| 18 | Udupi | Udupi | RAJU | RAMA | "298031411793100018" | 0 |
| 19 | Udupi | Udupi | Rathi Naik | Gururaj Naik | 298031411792800004" | 0 |
| 20 | Udupi | Udupi | RESHMA | ASHPAK SAHEBA | 298031411791600012" | 0 |
| 21 | Udupi | Udupi | Revathi | Somappa | 298031411791700025" | |
| 22 | Udupi | Udupi | REVATI NAIK | Gundu Naik | 298031411792100008" | |
| 23 | Udupi | Udupi | SABITHA NAIK | GANAPATHI NAIK | 298031411793100015" | 0 |
| 24 | Udupi | Udupi | SANDHYA | SATHISH NAIK | "298031411792500004" | 0 |
| 25 | Udupi | Udupi | Savitha Nayak | Ramakrishna Nayak | "298031411792700016" | 0 |
| 26 | Udupi | Udupi | Seetha Bai Yaane shobha | Gopal Naik | "298031411792700022" | 0 |
| 27 | Udupi | Udupi | SHAMBHAVI | SEENA | "298031411793100014" | 0 |
| 28 | Udupi | Udupi | SHANTHI | CHINNA SWAMI | "298031411792700018" | 0 |
| 29 | Udupi | Udupi | SUJATHA NAIK | VASANTHA NAIK | "298031411793200032 | 0 |
| 30 | Udupi | Udupi | SULOCHANA | Shankara Poojary | "298031411792100007 | 0 |
| 31 | Udupi | Udupi | SUMATHI | VENKATESH | "298031411791500074 | 0 |
| 32 | Udupi | Udupi | SUNANDA | Sudhakara Naik | "298031411793100017 | 0 |
| 33 | Udupi | Udupi | SUNDARI NAIK | SOMAYYA NAIK | "298031411792700020 | 0 |
| 34 | Udupi | Udupi | Usha | Basavana Gowda | "298031411793000004" | 0 |
| 35 | Udupi | Udupi | Vanaja | Ramakrishna | "298031411793200030 | 0 |
| 36 | Udupi | Udupi | VANITHA NAIK | UMESHA NAIK | "298031411793000005 | 0 |
| 37 | Udupi | Udupi | YASHODHA | KRISHNAPPA | 298031411791200024 | 0 |
| 38 | Udupi | Udupi | Sharmila | Chandrashekar Acharya | "298031411791500061 | 0 |
| 39 | Udupi | Udupi | Sharmila G Kanchan | Girish Kanchan | "298031411791500062 | 0 |
| 40 | Udupi | Udupi | VASU NAIK | BEESA NAIK | "298031411793000003 | 0 |
| 41 | Udupi | Udupi | Alice Dsouza | Anthony Dsouza | "298031411792400025 | 0 |
| 42 | Udupi | Udupi | Anitha Mable Mendonca | Valerian Mendonca | "298031411793600011 | 0 |
| 43 | Udupi | Udupi | GULABI | Sukra Naik | "298031411694000034 | 0 |
| 44 | Udupi | Udupi | Gulabi | Annayya Das | "298031411792600018 | 0 |
| 45 | Udupi | Udupi | JANAKI MENDON | Gopala Salian | "298031411791500060 | 0 |
| 46 | Udupi | Udupi | Lila Poojary | Jayakara Poojary | "298031411791700019 | 0 |
| 47 | Udupi | Udupi | NALINI | RAMESH NAIK | "298031411792100006 | 0 |
| 48 | Udupi | Udupi | RATHNA | Rathnakar | "298031411791500059 | 0 |
| 49 | Udupi | Udupi | SHEKHAR KUNDAR | Krishna Marakala | "298031411792600016" | 0 |
| 50 | Udupi | Udupi | HARINI SALIAN | Sanjeeva | "298031411791600013 | 0 |
| 51 | Udupi | Udupi | PREMA | Shiva | "298031411793100012 | 0 |
| 52 | Udupi | Udupi | A Divya D Nayak | Devadasa Nayak | "298031411793400008 | 112500 |
| 53 | Udupi | Udupi | APPI | SHEKHARA | "298031411793500014 | 0 |
| 54 | Udupi | Udupi | Divya Nayak | Krishna Nayak | "298031411792700026 | 1 |
| 55 | Udupi | Udupi | Harinakshi | Chandrashekhar Naik | "298031411792500008 | 0 |
| 56 | Udupi | Udupi | Indira S | Sathyanarayana M R | "298031411695700014 | 0 |
| 57 | Udupi | Udupi | LAKSHMI BANGERA | Ashok Karkera | "298031411791500083 | 0 |
| 58 | Udupi | Udupi | Poornima.M.Kotian | Madhava G Kotian | "298031411791100018 | 1 |
| 59 | Udupi | Udupi | Sangeetha | VASUDEVA ACHARYA | 298031411791500084 | 0 |
| 60 | Udupi | Udupi | SUMANA | Gururaj Acharya | 298031411791500085 | 0 |
| 61 | Udupi | Udupi | SUREKHA | Surendra | "298031411792000025 | 0 |
| 62 | Udupi | Udupi | Vijaya K | Ananda Madivala | "298031411794600016" | 1 |

Beneficary wise releases pending data

| Sl.No. | District_Name | City_Name | Name | Father_Name | Beneficiary_Code | Fund released |
|---|---|---|---|---|---|---|
| 63 | Udupi | Udupi | MADHURA | Kishor | "298031411791500082" | 112500 |
| 64 | Udupi | Udupi | Bhavani | Manoj Devadiga | "298031411791500086" | 112500 |
| 65 | Udupi | Udupi | Asha | GANPATHI NAIK | "298031411793200028" | 0 |
| 66 | Udupi | Udupi | Baby | Vijaya | "298031411791700031" | 0 |
| 67 | Udupi | Udupi | RADHA | SHEENA | "298031411791200029" | 0 |
| 68 | Udupi | Udupi | CHANDRAVATHI KARKERA | KRISHNA KOTIAN | "298031411695700012" | 0 |
| 69 | Udupi | Udupi | Jayalaxmi | Shankar G Poojary | "298031411791500067" | 0 |
| 70 | Udupi | Udupi | Rathi P Nayak | Prabhakar | "298031411791500065" | 0 |
| 71 | Udupi | Udupi | Sawmya | Gadyanna | "298031411794600015" | 0 |
| 72 | Udupi | Udupi | SUNDARI P | Bhargava | "298031411694000038" | 0 |
| 73 | Udupi | Udupi | Vasanthi | Sitharama Acharya | "298031411792000022" | 0 |
| 74 | Udupi | Udupi | Veena | Swami | "298031411794600014" | 0 |
| 75 | Udupi | Udupi | SHANTHA | KUMAR | "298031411791700022" | 0 |
| 76 | Udupi | Udupi | INDIRA | Purushothama Das | "298031411793200025" | 0 |
| 77 | Udupi | Udupi | Sabeeha Banu | Mohamad Nazir | "298031411791700020" | 0 |
| 78 | Udupi | Udupi | Tara Saldanha | Peter Saldanha | "298031411792400028" | 37500 |
| 79 | Udupi | Udupi | SHAKUNTHALA | SUDHAKAR POOJARI C | "298031411791500066" | [illegible] |
| 80 | Udupi | Udupi | Shobha | Nagesh Acharya | "2980314117917000[illegible]" | |
| 81 | Udupi | Udupi | Yashoda R Naik | RAMA NAIK | "2980314117925000[illegible]" | |
| 82 | Udupi | Udupi | DEVAKI ACHARTHI | Mahabala Achary | "298031411791500068" | 0 |
| 83 | Udupi | Udupi | kotribai | Dhanku Naik | "298031411794100002" | 0 |
| 84 | Udupi | Udupi | LALITHA | Muddu Poojary | "298031411791700023" | 0 |
| 85 | Udupi | Udupi | MANORMANI | SWAMINATH | "298031411792700024" | 0 |
| 86 | Udupi | Udupi | Vasanthi Saliyar | Dinesh Saliyan | "298031411793100013" | [illegible] |
| 87 | Udupi | Udupi | GOPI | Bogra | "298031411793400007" | |
| 88 | Udupi | Udupi | Sabina Dsouza | Lucas Dsouza | "298031411792400024" | [illegible] |
| 89 | Udupi | Udupi | Honaria Ammanna | Vincent Ammanna | "298031411794200007" | 0 |
| 90 | Udupi | Udupi | Laxmi S | Santhosh Suvarna | "298031411792000024" | 0 |
| 91 | Udupi | Udupi | SUPRITHA | Udaya | "298031411793500012" | 0 |
| 92 | Udupi | Udupi | JYOTHI | RAMACHANDRA NAIK | "298031411792600022" | 0 |
| 93 | Udupi | Udupi | LAXMI | Narayan Naik | "298031411793200035" | 0 |
| 94 | Udupi | Udupi | Shobha Poojarthy | Devendra Poojary | "298031411791500077" | 0 |
| 95 | Udupi | Udupi | SUMITHRA | SHIVA NAIK | "298031411792600020" | [illegible] |
| 96 | Udupi | Udupi | ANITHA | Janardhana Acharya | "298031411791700021" | [illegible] |
| 97 | Udupi | Udupi | SHEKHAR KOTIAN | GONDU THANDELA | "298031411791600010" | [illegible] |
| 98 | Udupi | Udupi | RAMA | M Padmanabha Nayak | "298031411793100020" | 0 |
| 99 | Udupi | Udupi | Saraswathi Mendan | DAMODARA MENDON | "298031411791600014" | 0 |
| 100 | Udupi | Udupi | JAYANTHI | Harish Salian | "298031411791500091" | 0 |
| 101 | Udupi | Udupi | SUJATHA | PADMANABHA N POOJARY | "298031411791100019" | [illegible] |
| 102 | Udupi | Udupi | MALLI | Shiva | "298031411793100022" | [illegible] |
| 103 | Udupi | Udupi | Gunavathi Nayak | Jayananda Nayak | "298031411792700031" | 112500 |
| 104 | Udupi | Udupi | MEENAKSHI | Umesh Naik | "298031411792500011" | [illegible] |
| 105 | Udupi | Udupi | Sandhya S Shetty | Shridhara Shetty | "298031411793900009" | 112500 |
| 106 | Udupi | Udupi | Sumathi Belchadthi | Babu Kunder | "298031411791700036" | [illegible] |
| 107 | Udupi | Udupi | BABY | Gopala Jathan | "298031411791900021" | 112500 |
| 108 | Udupi | Udupi | GIRIYA POOJARI | BADA POOJARI | "298031411694000042" | 112500 |
| 109 | Udupi | Udupi | Mallika | Devedas Suvarna | "298031411792700030" | 112500 |
| 110 | Udupi | Udupi | MEENAXI | Madhava C Salian | "298031411791100020" | [illegible] |
| 111 | Udupi | Udupi | Prathima Puthran | Shivananda | "298031411791300032" | 0 |
| 112 | Udupi | Udupi | SUMITHRA | Vasu | "298031411791700035" | 112500 |
| 113 | Udupi | Udupi | Vadiraja Achari | Lingappa Achari | "298031411792600025" | 112500 |
| 114 | Udupi | Udupi | RATHNA | Sudhakara | "298031411793900010" | 0 |
| 115 | Udupi | Udupi | Prema J Devadiga | Jayananda Devadiga | "298031411791500095" | 0 |
| 116 | Udupi | Udupi | K Yashodha | Shivananda Kotian | "298031411794600018" | 0 |
| 117 | Udupi | Udupi | SHAKUNTHALA | Shankara Amin | "298031411791600015" | [illegible] |
| 118 | Udupi | Udupi | Shantha Bai | Loku | "298031411792400034" | [illegible] |
| 119 | Udupi | Udupi | Jaya D Amin | Dinesh Poojary | "298031411793800018" | [illegible] |
| 120 | Udupi | Udupi | PREMA | Narayana Karkera | "298031411791100021" | 37500 |
| | | | | | Total | 1387506 |

P. [signature]

ಉಡುಪಿ ವಿಧಾನಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ನಗರ ಪ್ರದೇಶದಲ್ಲಿ ಬಾಕಿ ಮನೆಗಳಿಗೆ ಬಿಡುಗಡೆಯಾಗಬೇಕಿರುವ ಫಲಾನುಭವಿಗಳ ಅನುದಾನದ ವಿವರಗಳು

| Sl.No. | District | Town | Constituency | Scheme | Series | Benfcode | Name | Spouse | Caste | Progress | Amount released | Unit Cost | Balance to be paid |
|---|---|---|---|---|---|---|---|---|---|---|---|---|---|
| 1 | Udupi | Udupi CMC | Udupi | PMAY(U) GOI Fund | 2019-2020 | 266248 | A Divya D Nayak | Devadasa Nayak | Gen | Complete | 112500 | 150000 | 37500 |
| 2 | Udupi | Udupi CMC | Udupi | PMAY(U) GOI Fund | 2019-2020 | 266336 | PoornimaMKotian | Madhava G Kotian | Gen | Complete | 1 | 150000 | 149999 |
| 3 | Udupi | Udupi CMC | Udupi | PMAY(U) GOI Fund | 2019-2020 | 266444 | Divya Nayak | Krishna Nayak | Gen | Complete | 1 | 150000 | 149999 |
| 4 | Udupi | Udupi CMC | Udupi | PMAY(U) GOI Fund | 2019-2020 | 266489 | Vijaya K | Ananda Madivala | Gen | Complete | 1 | 150000 | 149999 |
| 5 | Udupi | Udupi CMC | Udupi | PMAY(U) GOI Fund | 2021-2022 | 266779 | MEENAXI | Madhava C Salian | Gen | Complete | 1 | 150000 | 149999 |
| 6 | Udupi | Udupi CMC | Udupi | PMAY(U) GOI Fund | 2021-2022 | 266801 | MEENAKSHI | Umesh Naik | Gen | Complete | 1 | 150000 | 149999 |
| 7 | Udupi | Udupi CMC | Udupi | PMAY(U) GOI Fund | 2021-2022 | 266804 | Mallika | Devedas Suvarna | Gen | Complete | 112500 | 150000 | 37500 |
| 8 | Udupi | Udupi CMC | Udupi | PMAY(U) GOI Fund | 2021-2022 | 266805 | Gunavathi Nayak | Jayananda Nayak | Gen | Complete | 112500 | 150000 | 37500 |
| **Total** | | | | | | | | | | | | | 862495 |

ಉಡುಪಿ ವಿಧಾನಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬಾಕಿ ಮನೆಗಳಿಗೆ ಬಿಡುಗಡೆಯಾಗಬೇಕಿರುವ ಫಲಾನುಭವಿಗಳ ಅನುದಾನದ ವಿವರಗಳು

| | | | | | | | | | | | | | |
|---|---|---|---|---|---|---|---|---|---|---|---|---|---|
| 1 | Udupi | Brahmavara | Udupi | Basava Housing Scheme | 2021-2022 | 214012 | Rathna | Manjunatha | Gen | Complete | 89400 | 119400 | 30000 |
| **Total** | | | | | | | | | | | | | 30000 |
| **Grand Total** | | | | | | | | | | | | | 892495 |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 124 |
| ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್.ಕೆ( ಉಡುಪಿ) |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| ಪ್ರಶ್ನೆ | ಉತ್ತರ |
|---|---|
| (ಅ) 2019-20 ನೇ ಸಾಲಿನಿಂದ ಇಲ್ಲಿಯವರೆಗೆ ಅತಿವೃಷ್ಟಿ/ ಪ್ರವಾಹದಿಂದ ಹಾನಿಯಾದ ಮನೆಗಳ ಪುನರ್ ನಿರ್ಮಾಣ/ದುರಸ್ತಿ ಬಾಬ್ತು ಅರ್ಹ ನೆರೆ ಸಂತ್ರಸ್ಥರಿಗೆ ಮುಖ್ಯಮಂತ್ರಿ ಪರಿಹಾರ ನಿಧಿಯಡಿ ಫಲಾನುಭವಿಗಳ ಖಾತೆಗೆ ಪರಿಹಾರಧನ ಬಿಡುಗಡೆ ಮಾಡುವಲ್ಲಿ ಇರುವ ತಾಂತ್ರಿಕ ತೊಂದರೆಗಳೇನು: | ಸರ್ಕಾರದ ಆದೇಶ/ಮಾರ್ಗಸೂಚಿಯನುಸಾರ ನೆರೆ ಹಾವಳಿಗೆ ತುತ್ತಾಗಿ ಹಾನಿಗೊಳಗಾದ ಮನೆಗಳ ಹಾನಿ, ಪ್ರಮಾಣವನ್ನು ಸಂಬಂಧಪಟ್ಟ, ಕಂದಾಯ ಅಧಿಕಾರಿಗಳು, ಸಮೀಕ್ಷೆ ಮಾಡಿ ಹಾನಿಗೊಳಗಾದ ಮನೆಯ ಹಾನಿ ಪ್ರಮಾಣಕ್ಕೆ ಅನುಗುಣವಾಗಿ ಮನೆಯ ವರ್ಗವನ್ನು ಎ, ಬಿ2, ಬಿ1 ಮತ್ತು ಸಿ ಎಂದು ವಿಂಗಡಿಸಲಾಗಿದೆ.<br><br>ತಹಶೀಲ್ದಾರ್ ರವರು ನಮೂದಿಸಿ ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಫಲಾನುಭವಿಗಳು ನಿರ್ಮಿಸಿರುವ ಮನೆಗಳು ವಿವಿಧ ಹಂತಗಳ ಜಿಪಿಎಸ್ ಭಾವಚಿತ್ರಗಳನ್ನು ಗ್ರಾಮೀಣ ಪ್ರದೇಶದಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ಹಾಗೂ ನಗರ ಪ್ರದೇಶದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳು ಪುನರ್ವಸತಿ Mobile App ಮೂಲಕ ಜಜಿಪಿಎಸ್ ಮಾಡಿದ ನಂತರ ತಹಶೀಲ್ದಾರ್ ರವರು ಪರಿಶೀಲಿಸಿ , ಅರ್ಹಗೊಳಿಸಿ( Audit) ಅನುದಾನ ದೃಢೀಕರಣ (Payment certification) ನೀಡಿದ ಪ್ರಗತಿಯಲ್ಲಿರುವ ಎಲ್ಲಾ ಮನೆಗಳಿಗೆ ಪ್ರಗತಿಗೆ ಅನುಗುಣವಾಗಿ DBT ಆಧಾರ್ ಆಧಾರಿತವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಪರಿಹಾರಧನ ಪಾವತಿಸಲಾಗುತ್ತಿದ್ದೆ.<br>ಈ ಪ್ರಕ್ರಿಯೆಯಲ್ಲಿ ಯಾವುದೇ ತಾಂತ್ರಿಕ ತೊಂದರೆಗಳಿರುವುದಿಲ್ಲ. |
| (ಆ) ಮನೆಗಳ ಪುನರ್ ನಿರ್ಮಾಣದ ಹಂತವಾರು ಜಿ.ಪಿ.ಎಸ್ ಪ್ರಗತಿಯನ್ನು ರಾಜೀವಗಾಂಧಿ ನಿಗಮದ ವೆಬ್ ಸೈಟನಲ್ಲಿ ಇಂಧೀಕರಿಸಿದ್ದರೂ ಪರಿಹಾರ ಧನ ಬಿಡುಗಡೆಯಾಗದೇ ಸಂತ್ರಸ್ಥರು ಸಂಕಷ್ಟದಲ್ಲಿರುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸದೆ ಇರುವ ಕಾರಣಗಳೇನು: | 2019, 2020 ಮತ್ತು 2021 ನೇ ಸಾಲಿನ ಮಳೆ/ ಪ್ರವಾಹದಿಂದ ರಾಜ್ಯದಲ್ಲಿ ಒಟ್ಟು 232568 ಮನೆಗಳು ಹಾನಿಗೊಳಗಾಗಿದ್ದು, ವರ್ಗಾವಾರು ವಿವರ ಈ ಕೆಳಕಂಡಂತಿರುತ್ತದೆ. |

| ಹಾನಿಯಾದ ಮನೆಯ ವರ್ಗ | ವರ್ಷ | | | ಒಟ್ಟು |
|---|---|---|---|---|
| | 2019 | 2020 | 2021 | |
| ಸಂಪೂರ್ಣ ಎ ವರ್ಗ | 11185 | 1126 | 2912 | 15223 |
| ಭಾಗಶ- ಪುನರ್ ನಿರ್ಮಾಣ ಬಿ2 | 27787 | 6623 | 18720 | 53130 |
| ಭಾಗಶ- ದುರಸ್ತಿ -ಬಿ1 | 3424 | 1006 | 5567 | 9997 |
| ಅಲ್ಪ ಸ್ವಲ್ಪ - ಸಿ | 96060 | 30243 | 26169 | 152472 |
| ಅನಧಿಕೃತ ಮನೆಗಳು | 1299 | 173 | 274 | 1746 |
| ಒಟ್ಟು | 139755 | 39171 | 53642 | 232568 |

ಜಿಲ್ಲಾಧಿಕಾರಿಗಳು ಅನುಮೋದನೆಗೊಂಡ ಮನೆಗಳಿಗೆ ಜಿ.ಪಿ.ಎಸ್ ಆಧಾರಿತ ಭೌತಿಕ ಪ್ರಗತಿಗನುಗುಣವಾಗಿ ರಾಜೀವ್ ಗಾಂಧಿ ವಸತಿ ನಿಗಮದಿಂದ ರೂ.2203.17 ಕೋಟಿಗಳನ್ನು ಬಿಡುಗಡೆ ಮಾಡಿರುತ್ತಾರೆ. ವಿವರಗಳು ಈ ಕೆಳಕಂಡಂತಿರುತ್ತದೆ:

ರೂ.ಕೋಟಿಗಳಲ್ಲಿ

| ಹಾನಿಯಾದ ಮನೆಯ ವರ್ಗ | ವರ್ಷ | | | ಒಟ್ಟು |
|---|---|---|---|---|
| | 2019 | 2020 | 2021 | |
| ಸಂಪೂರ್ಣ ಎ ವರ್ಗ | 445.57 | 29.94 | 18.64 | 494.15 |
| ಭಾಗಶ-ಪುನರ್ ನಿರ್ಮಾಣ ಬಿ2 | 1172.22 | 197.42 | 117.19 | 1486.83 |
| ಭಾಗಶ-ದುರಸ್ಥಿ - ಬಿ1 | 69.52 | 19.00 | 18.84 | 107.36 |
| ಅಲ್ಪ ಸ್ವಲ್ಪ - ಸಿ | 40.35 | 65.48 | 0.00 | 114.83 |
| ಒಟ್ಟು | 1736.66 | 341.84 | 154.67 | 2203.17 |

2022ನೇ ಸಾಲಿನ ಮಳೆ/ ಪ್ರವಾಹದಿಂದ ಹಾನಿಗೊಳಗಾದ ಮನೆಗಳ ಮಾಹಿತಿಯನ್ನು RGRHCL ವತಿಯಿಂದ ತಂತ್ರಾಂಶದಲ್ಲಿ ನಮೂದು ಮಾಡಲು ದಿನಾಂಕ:15.09.2022 ರವರೆಗೆ ಕಾಲಾವಕಾಶ ನೀಡಲಾಗಿದೆ. ದಿನಾಂಕ:07.09.2022 ರವರೆಗೆ ರಾಜ್ಯಾದ್ಯಾಂತ ಒಟ್ಟು 27549 ಮನೆಗಳನ್ನು ತಹಶೀಲ್ದಾರ್ ರವರು ನಮೂದಿಸಿದ್ದು, 16264 ಮನೆಗಳನ್ನು ಜಿಲ್ಲಾದಿಕಾರಿಗಳು ಅನುಮೋದಿಸಿರುತ್ತಾರೆ.

| ಕ್ರ. ಸಂ. | ಹಾನಿಯಾದ ಮನೆಯ ವರ್ಗ | ನಮೂದು | ಅನುಮೋದನೆ |
|---|---|---|---|
| 1 | ಎ | 1445 | 604 |
| 2 | ಬಿ-2 | 7534 | 5142 |
| 3 | ಬಿ-1 | 3913 | 2125 |
| 4 | ಸಿ | 14657 | 8393 |
| ಒಟ್ಟು | | 27549 | 16264 |

| | |
|---|---|
| (ಇ) 2019-20 ರಿಂದ ಇಲ್ಲಿಯವರೆಗೆ ನೆರೆ ಸಂತ್ರಸ್ತರ ಮನೆ ಪುನರ್ ನಿರ್ಮಾಣದ ಕಾರ್ಯ ಮುಗಿದಿದ್ದರೂ ಸಂಪೂರ್ಣ ಪರಿಹಾರ ಧನ ಬಿಡುಗಡೆ ಮಾಡುವಲ್ಲಿ ಸರ್ಕಾರಕ್ಕೆ ಇರುವ ತೊಡಕುಗಳೇನು: | ಜಿಲ್ಲಾಧಿಕಾರಿಗಳು ಅನುಮೋದಿಸಿರುವ ಒಟ್ಟು 232568 ಮನೆಗಳ ಪೈಕಿ ಒಟ್ಟು 68353 ಮನೆಗಳನ್ನು ಸಂತ್ರಸ್ಥರು ಪುನರ್ ನಿರ್ಮಾಣ ಮಾಡುತ್ತಿದ್ದು, ಆ ಪೈಕಿ 27440 ಮನೆಗಳು ಪೂರ್ಣಗೊಂಡಿದ್ದು, 23378 ಮನೆಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿದ್ದು, 13278 ಮನೆಗಳು ಪ್ರಾರಂಭವಾಗಬೇಕಿರುತ್ತದೆ. ಹಾಗೂ 4257 ಮನೆಗಳು ವಿವಿಧ ಕಾರಣಗಳಲಿಂದ ಬ್ಲಾಕ್ ಆಗಿರುತ್ತದೆ. ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |

| | |
|---|---|
| (ಈ) ಉಡುಪಿ ಜಿಲ್ಲೆಯಲ್ಲಿ ಮನೆ ಪುನರ್ ನಿರ್ಮಾಣ ಮಾಡಿ ಪರಿಹಾರ ಧನ ಬಿಡುಗಡೆಯಾಗದೇ ಇರುವ ಫಲಾನುಭವಿಗಳ ಸಂಖ್ಯೆ ಎಷ್ಟು? (ನಗರ ಮತ್ತು ಗ್ರಾಮಾಂತರ ಪ್ರತ್ಯೇಕ ಪಟ್ಟಿಯ ಮಾಹಿತಿ ನೀಡುವುದು) | ಉಡುಪಿ ಜಿಲ್ಲೆಯಲ್ಲಿ ಮನೆ ಪುನರ್ ನಿರ್ಮಾಣ ಮಾಡಿ ಪರಿಹಾರ ಧನ ಬಿಡುಗಡೆಯಾಗದೇ ಇರುವ ಫಲಾನುಭವಿಗಳು ಉಡುಪಿ ಗ್ರಾಮಾಂತರದಲ್ಲಿ 68 ಹಾಗೂ ನಗರ ಪ್ರದೇಶದಲ್ಲಿ 2 ಪ್ರಕರಣಗಳಿರುತ್ತವೆ. |

ಕಂಇ *353* ಟಿಎನ್‌ಆರ್ *2022*

(ಆರ್. ಅಶೋಕ)
ಕಂದಾಯ ಸಚಿವರು

ಶ್ರೀ ರಘು ಪತಿ ಭಟ್.ಕೆ ಮಾನ್ಯ ಶಾಸಕರು ಉಡುಪಿ ವಿಧಾನ ಸಭಾ ಕ್ಷೇತ್ರ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:124ಕ್ಕೆ ಸಂಬಂಧಿಸಿದ ವಿವರ:

ಅನುಬಂಧ-1

| ವರ್ಷ | ಹಾನಿಯಾದ ಮನೆಯ ವರ್ಗ | ಅನುಮೋದನೆ | ಪೂರ್ಣಗೊಂಡ ಮನೆಗಳು | ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾದ ಮನೆಗಳು | ಬ್ಲಾಕ್ ಆದ ಮನೆಗಳು |
|---|---|---|---|---|---|---|
| 2019 | ಎ | 11185 | 6728 | 2014 | 1126 | 1317 |
| | ಬಿ2 | 27787 | 17788 | 5731 | 2018 | 2250 |
| | ಒಟ್ಟು | 38972 | 24516 | 7745 | 3144 | 3567 |
| 2020 | ಎ | 1126 | 333 | 573 | 184 | 36 |
| | ಬಿ2 | 6623 | 2239 | 3472 | 652 | 260 |
| | ಒಟ್ಟು | 6623 | 2239 | 3472 | 652 | 296 |
| 2021 | ಎ | 2912 | 52 | 1491 | 1287 | 82 |
| | ಬಿ2 | 18720 | 300 | 10097 | 8011 | 312 |
| | ಒಟ್ಟು | 68353 | 27440 | 23378 | 13278 | 4257 |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 125 |
| ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ ಕೆ. (ಉಡುಪಿ) |
| ಉತ್ತರಿಸುವ ದಿನಾಂಕ | : | 12.09.2022 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಲೋಕೋಪಯೋಗಿ ಇಲಾಖೆ ಅಧೀನದ ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಯ ಇಕ್ಕೆಲಗಳಲ್ಲಿ ಭೂ ಗಡಿಯ ಅಂಚಿನಿಂದ ಕಟ್ಟಡ ನಿರ್ಮಾಣಕ್ಕೆ ನಿರಾಕ್ಷೇಪಣಾ ಪತ್ರ ನೀಡುವಲ್ಲಿ ಸಂಬಂಧಿಸಿದ ಪ್ರಾಧಿಕಾರ ಸ್ಪಂಧನೆ ನೀಡದೇ ಸಾರ್ವಜನಿಕವಾಗಿ ಸಮಸ್ಯೆಗಳು ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಲೋಕೋಪಯೋಗಿ ಇಲಾಖೆ ಅಧೀನದ ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಯ ಇಕ್ಕೆಲಗಳಲ್ಲಿ ಕಟ್ಟಡ ನಿರ್ಮಾಣಕ್ಕೆ ನಿರಾಕ್ಷೇಪಣಾ ಪತ್ರ ನೀಡಬೇಕಾದ ಸಂಬಂಧಪಟ್ಟ ಪ್ರಾಧಿಕಾರಗಳು NOC ನೀಡುವಂತೆ ಲೋಕೋಪಯೋಗಿ ಇಲಾಖೆಯನ್ನು ಕೋರಿದಲ್ಲಿ, ಇಲಾಖೆಯು ಅದನ್ನು ನಿಯಮಾನುಸಾರ ಪರಿಶೀಲಿಸಿ NOC ನೀಡಲು ಕ್ರಮವಹಿಸಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ಲೋಕೋಪಯೋಗಿ ಇಲಾಖೆಯ ಸುತ್ತೋಲೆ ಸಂಖ್ಯೆ; ಲೋಇ 466 ಸಿ.ಆರ್.ಎಂ 2022(ಇ) ಬೆಂಗಳೂರು, ದಿನಾಂಕ: 30.06.2022 ರಲ್ಲಿ ಭೂ ಗಡಿಯ ಅಂಚಿನಿಂದ ಕಟ್ಟಡ ನಿರ್ಮಾಣಗಳ ಅಂತರ 6 ಮೀ. ಎಂಬುದಾಗಿ ಆದೇಶಿಸಿ, ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಅಭಿಯಂತರರನ್ನು ಭೂ ಗಡಿಯನ್ನು ಗುರುತಿಸುವಲ್ಲಿ ಸಕ್ಷಮ ಪ್ರಾಧಿಕಾರವೆಂದು ಗುರುತಿಸಿದ್ದರೂ, ನಿಗದಿಪಡಿಸಿದ ಪರಿಮಿತಿಯಲ್ಲಿ ಭೂ ಗಡಿ ಅಂಚನ್ನು ನಿರ್ಧರಿಸುವಲ್ಲಿ, ಇರುವ ತೊಡಕುಗಳೇನು: ನಿಯಂತ್ರಣ ರೇಖೆಯನ್ನು ಗುರುತಿಸುವ ಆದೇಶದ ಅನುಷ್ಠಾನದಲ್ಲಿ ಇರುವ ಸಮಸ್ಯೆಗಳೇನು; (ವಿವರ ನೀಡುವದು) | ಈಗಾಗಲೇ ಇಲಾಖಾ ವತಿಯಿಂದ ಜಿಲ್ಲಾ ಮುಖ್ಯ ರಸ್ತೆ ಮತ್ತು ರಾಜ್ಯ ಹೆದ್ದಾರಿಗಳ ದಾಖಲಿತ ಭೂಗಡಿಯನ್ನು ಗುರುತಿಸುವ ಸರ್ವೇ ಕಾರ್ಯವನ್ನು ಕೈಗೆತ್ತಿಕೊಂಡಿದ್ದು, ಸದರಿ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. |
| ಇ) | ರಾಜ್ಯ ಹೆದ್ದಾರಿಯ ದಾಖಲಿತ ರಸ್ತೆ ಭೂಗಡಿಯ ಅಂಚಿನ ಪರಿಮಿತಿ 6 ಮೀಟರ್ ಎಂದು ಆದೇಶಿಸಿದ ಹಾಗೆಯೇ ಜಿಲ್ಲಾ ಮುಖ್ಯ ರಸ್ತೆ (ಎಂ.ಡಿ.ಆರ್)ಯ ಪರಿಮಿತಿಯನ್ನು 6 ಮೀಟರ್ ಎಂದು ಪರಿಗಣಿಸಿ, ಆದೇಶ ಹೊರಡಿಸುವಲ್ಲಿ ಸರ್ಕಾರದ ನಿಲುವೇನು? | ಸಧ್ಯಕ್ಕೆ ಇಂತಹ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಲೋಇ 80 ಸಿಕ್ಯೂಎನ್ 2022(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 126 |
| ಸದಸ್ಯರ ಹೆಸರು | ಶ್ರೀ ನರೇಂದ್ರ ಆರ್ (ಹನೂರು) |
| ಉತ್ತರಿಸಬೇಕಾದ ದಿನಾಂಕ | 12.09.2022 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಹನೂರು ವಿಧಾನಸಭಾ ಕ್ಷೇತ್ರದ ಹನೂರನ್ನು ಹೊಸ ತಾಲ್ಲೂಕಾಗಿ ಘೋಷಣೆ ಮಾಡಿ, ಸುಮಾರು 5 ವರ್ಷಗಳು ಕಳೆದರೂ, ಎಲ್ಲಾ ಇಲಾಖೆಗಳ ಸರ್ಕಾರಿ ಕಛೇರಿಗಳು ಇಲ್ಲಿಯವರೆಗೂ ಅಸ್ತಿತ್ವಕ್ಕೆ ಬರದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನೂತನ ಹನೂರು ತಾಲ್ಲೂಕಿನಲ್ಲಿ ಈ ಕೆಳಕಂಡ ಸರ್ಕಾರಿ ಕಛೇರಿಗಳನ್ನು ಪ್ರಾರಂಭಿಸಲಾಗಿದೆ.<br>1. ತಹಸೀಲ್ದಾರ್ ಕಚೇರಿ; 2. ಪಟ್ಟಣ ಪಂಚಾಯತಿ ಕಚೇರಿ<br>3. ಸ.ಕಾ. ಅಭಿಯಂತರರ ಕಚೇರಿ, ಸೆಸ್ಕಾಂ; 4. ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿ<br>5. ಉಪ ನೋಂದಣಿ ಕಛೇರಿ; 6. ಪ್ರಾಥಮಿಕ ಆರೋಗ್ಯ ಕೇಂದ್ರ<br>7. ಪೊಲೀಸ್ ಠಾಣೆ; 8. ಅಗ್ನಿ ಶಾಮಕ ಠಾಣೆ<br>9. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಕಚೇರಿ; 10. ವಲಯ ಅರಣ್ಯಾಧಿಕಾರಿ ಕಚೇರಿ |
| ಆ) | ಬಂದಿದ್ದಲ್ಲಿ, ಯಾವಾಗ ಎಲ್ಲಾ ಸರ್ಕಾರಿ ಕಛೇರಿಗಳನ್ನು ತಾಲ್ಲೂಕು ಕೇಂದ್ರದಲ್ಲಿ ಪ್ರಾರಂಭಿಸಲಾಗುವುದು; (ಪೂರ್ಣ ವಿವರ ನೀಡುವುದು) | ನೂತನ ತಾಲ್ಲೂಕಿನಲ್ಲಿ ಇನ್ನುಳಿದ ಇಲಾಖೆಗಳ ತಾಲ್ಲೂಕು ಮಟ್ಟದ ಕಚೇರಿಗಳನ್ನು ಪ್ರಾರಂಭಿಸಲು ಅನುವಾಗುವಂತೆ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹುದ್ದೆಗಳನ್ನು ಸೃಜಿಸಿ ಹಂತ-ಹಂತವಾಗಿ ಕಚೇರಿಗಳನ್ನು ಪ್ರಾರಂಭಿಸಲು ಎಲ್ಲಾ ಇಲಾಖೆಗಳ ಅಪರ ಮುಖ್ಯ / ಪ್ರಧಾನ ಕಾರ್ಯದರ್ಶಿಗಳಿಗೆ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಮೂಲಕ ಸೂಕ್ತ ನಿರ್ದೇಶನ ನೀಡಲಾಗಿದೆ. ಹಾಗೂ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಸಹ ಸೂಕ್ತ ಕ್ರಮ ವಹಿಸಲು ಸೂಚನೆ ನೀಡಲಾಗಿದೆ. |
| ಇ) | ಹನೂರು ತಾಲ್ಲೂಕಿನಲ್ಲಿ ತಾಲ್ಲೂಕು ಆಡಳಿತ ಸೌಧ ನಿರ್ಮಾಣ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ, ಇದ್ದಲ್ಲಿ, ಪ್ರಸ್ತುತ ಯಾವ ಹಂತದಲ್ಲಿದೆ; ಯಾವ ಕಾಲಮಿತಿಯಲ್ಲಿ ತಾಲ್ಲೂಕು ಆಡಳಿತ ಸೌಧ ಕಟ್ಟಡ ನಿರ್ಮಾಣ ಕಾಮಗಾರಿ ಪ್ರಾರಂಭಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ಹನೂರು ಹೊಸ ತಾಲ್ಲೂಕಿನಲ್ಲಿ 'ತಾಲ್ಲೂಕು ಆಡಳಿತ ಸೌಧ' ನಿರ್ಮಿಸಲು ಹುಲ್ಲೇಪುರ ಗ್ರಾಮದ ಸ.ನಂ.312/ಡಿ ರಲ್ಲಿ 7.76 ಎಕರೆ ಮತ್ತು 312/ಇ ರಲ್ಲಿ 1.17 ಎಕರೆ ಸೇರಿದಂತೆ ಒಟ್ಟು 8.93 ಎಕರೆ ಜಮೀನನ್ನು ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು ಕಾಯ್ದಿರಿಸಲಾಗಿದೆ.<br>ಮುಖ್ಯ ವಾಸ್ತು ಶಿಲ್ಪಿ, ಲೋಕೋಪಯೋಗಿ ಇಲಾಖೆ ಇವರಿಂದ ಸ್ವೀಕೃತಗೊಂಡ ಎರಡು ಮಾದರಿಯ ನೀಲ ನಕ್ಷೆಯು ಪರಿಶೀಲನಾ ಹಂತದಲ್ಲಿದ್ದು, ಅನುಮೋದನೆಗೊಂಡ ನಂತರ ಜಿಲ್ಲಾಧಿಕಾರಿಯವರಿಂದ ಸೂಕ್ತ ಪ್ರಸ್ತಾವನೆಯನ್ನು ಪಡೆದು ಹನೂರು ತಾಲ್ಲೂಕು ಆಡಳಿತ ಸೌಧವನ್ನು ನಿರ್ಮಿಸಲು ನಿಯಮಾನುಸಾರ ಪರಿಶೀಲಿಸಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಕ್ರಮ ವಹಿಸಲಾಗುವುದು. |

**ಸಂಖ್ಯೆ: ಕಂಇ 53 ಎಲ್‌ಆರ್‌ಡಿ 2022**

**(ಆರ್.ಅಶೋಕ)**
ಕಂದಾಯ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 127 |
| ಸದಸ್ಯರ ಹೆಸರು | : | ಶ್ರೀ ನರೇಂದ್ರ.ಆರ್(ಹನೂರು) |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| ಪ್ರಶ್ನೆ | ಉತ್ತರ |
|---|---|
| (ಅ) ಚಾಮರಾಜನಗರ ಜಿಲ್ಲೆಯಲ್ಲಿ ಇತ್ತೀಚೆಗೆ ಸುರಿದ ಭಾರಿ ಮಳೆಗೆ ನೂರಾರು ಮನೆಗಳು ಹಾಗೂ ಸಾವಿರಾರು ಎಕರೆ ಬೆಳೆಗಳು ಜಲಾವೃತವಾಗಿ ಅಪಾರ ನಷ್ಟವುಂಟಾಗಿರುವುದು ಹಾಗೂ ಜನ-ಜಾನುವಾರುಗಳು ಮೃತಪಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| (ಆ) ಬಂದಿದ್ದಲ್ಲಿ, ಈ ನಷ್ಟ ಪರಿಹಾರ ನೀಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು.(ತಾಲ್ಲೂಕುವಾರು ವಿವರವನ್ನು ಒದಗಿಸುವುದು) | ಚಾಮರಾಜಗರ ಜಿಲ್ಲಾಧಿಕಾರಿಗಳ ಪ್ರಕೃತಿ ವಿಕೋಪ ಪಿಡಿ ಖಾತೆಯಲ್ಲಿ ರೂ.23,74,24,510/-ಗಳು ಅನುದಾನ ಲಭ್ಯವಿದ್ದು ಈ ಕೆಳಕಂಡಂತೆ ತಹಶೀಲ್ದಾರ್ ಗಳ ಪಿಡಿ ಖಾತೆಗೆ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಸಂಬಂಧಪಟ್ಟ ತಾಲ್ಲೂಕು ಹಂತದಲ್ಲಿ ಪರಿಹಾರ ಪಾವತಿಸಲು ಕ್ರಮವಹಿಸಲಾಗುತ್ತಿದೆ.<br><br>ಕ್ರ.ಸಂ / ತಹಶೀಲ್ದಾರ್ / ಬಿಡುಗಡೆಗೊಳಿಸಿರುವ ಅನುದಾನ (ರೂ ಲಕ್ಷಗಳಲ್ಲಿ<br>1 / ಚಾಮರಾಜನಗರ / 200.00<br>2 / ಕೊಳ್ಳೇಗಾಲ / 50.00<br>3 / ಗುಂಡ್ಲಪೇಟೆ / 80.00<br>4 / ಹನೂರು / 50.00<br>5 / ಯಳಂದೂರು / 250.00 |
| (ಇ) ಪರಿಹಾರ ವಿತರಿಸಲು ಯಾವ ಮಾನದಂಡವನ್ನು ಅನುಸರಿಸಲಾಗಿದೆ? (ವಿವರ ನೀಡುವುದು) | 1. ಪ್ರತಿ ತಾಲ್ಲೂಕಿನಲ್ಲಿ ಕೃಷಿ ಮತ್ತು ತೋಟಗಾರಿಕೆ ಬೆಳೆ ಹಾನಿಗೆ ಸಂಬಂಧಿಸಿದಂತೆ ಅರ್ಹ ಫಲಾನುಭವಿಗಳ ಮಾಹಿತಿಯನ್ನು ಪರಿಹಾರ ತಂತ್ರಾಂಶದಲ್ಲಿ ನಮೂದಿಸಲಾಗಿದ್ದು, ತಂತ್ರಾಂಶದಿಂದ ರೈತರಿಗೆ ಬ್ಯಾಂಕ್ ಖಾತೆಗೆ ಪರಹಾರ ಧನವನ್ನು ಜಮೆ ಮಾಡಲಾಗುತ್ತಿದೆ.<br><br>2.ಕೇಂದ್ರ ಸರ್ಕಾರದ SDRF/NDFRF ಮಾರ್ಗಸೂಚಿಯನುಸಾರ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಕಂಇ 275 ಟಿಎನ್ ಆರ್ 2022:ದಿನಾಂಕ:12-07-2022 ರನ್ವಯ ಮಾನವ ಹಾನಿ ಮತ್ತು ಮನೆಹಾನಿ ಪ್ರಕರಣಗಳಿಗೆ ಪರಿಹಾರ ಪಾವತಿಸಲು ಕ್ರಮವಹಿಸಲಾಗುತ್ತಿದೆ. |

ಕಂಇ *351* ಟಿಎನ್‌ಆರ್ *2022*

(ಆರ್. ಅಶೋಕ)
ಕಂದಾಯ ಸಚಿವರು

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**13ನೇ ಅಧಿವೇಶನ**

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 128

ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್ (ಹನೂರು)

ಉತ್ತರಿಸುವ ದಿನಾಂಕ : 12-09-2022

ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಚಾಮರಾಜನಗರ ಜಿಲ್ಲೆಗೆ ಅಪೆಂಡಿಕ್ಸ್ -ಇ ಯೋಜನೆಯಡಿಯಲ್ಲಿ ಲೋಕೋಪಯೋಗಿ ಇಲಾಖೆಯ ವತಿಯಿಂದ ಮಂಜೂರು ಮಾಡಿರುವ ಕಾಮಗಾರಿಗಳಾವುವು; ಬಿಡುಗಡೆ ಮಾಡಿರುವ ಅನುದಾನವೆಷ್ಟು; (ವಿಧಾನಸಭಾ ಕ್ಷೇತ್ರವಾರು ಪ್ರತ್ಯೇಕವಾಗಿ ವಿವರ ನೀಡುವುದ) | 2019-20, 2020-21, ಹಾಗೂ 2021-22ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆ ವತಿಯಿಂದ ಚಾಮರಾಜನಗರ ಜಿಲ್ಲೆಗೆ ಅಪೆಂಡಿಕ್ಸ್ –ಇ ಯೋಜನೆಯಡಿಯಲ್ಲಿ ಬಿಡುಗಡೆ ಮಾಡಿರುವ ಅನುದಾನದ ವಿವರ ಹಾಗೂ ಕೈಗೆತ್ತಿಕೊಂಡಿರುವ ಕಾಮಗಾರಿಗಳ ಪ್ರಸ್ತುತ ಹಂತದ ವಿಧಾನಸಭಾ ಕ್ಷೇತ್ರವಾರು ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| ಆ) | ಇವುಗಳಲ್ಲಿ ಪೂರ್ಣಗೊಂಡಿರುವ ಹಾಗು ಅಪೂರ್ಣಗೊಂಡಿರುವ ಕಾಮಗಾರಿಗಳಾವುವು? (ವಿವರ ನೀಡುವುದು) | |

ಸಂ:ಲೋಇ/1413/ಐಎಫ್ಎ/2022 (ಇ-ಕಛೇರಿ)

(ಸಿ.ಸಿ ಪಾಟೀಲ)
ಲೋಕೋಪಯೋಗಿ ಸಚಿವರು

(3)

LAQ = 128 ಶ್ರೀ ನರೇಂದ್ರ ಆರ್ (ಹನೂರು) ಅನುಬಂಧ-1. (ದಕ್ಷಿಣ ವಲಯ) ರೂ: ಲಕ್ಷಗಳಲ್ಲಿ

# ಅನುಬಂಧ–01 (2019–20)

| ಕ್ರ.ಸಂ | ಜಿಲ್ಲೆ | ಕ್ಷೇತ್ರ | ತಾಲ್ಲೂಕು | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ ಲಕ್ಷಗಳಲ್ಲಿ) | ಅಭಿವೃದ್ಧಿ ಪಡಿಸಲು ಉದ್ದೇಶಿಸಿರುವ ಉದ್ದ (ಕಿ.ಮೀ ಗಳಲ್ಲಿ) | ಅಭಿವೃದ್ಧಿ ಪಡಿಸಲಾದ ಉದ್ದ (ಕಿ.ಮೀ ಗಳಲ್ಲಿ) | ಅನುದಾನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 11 |
| **5054–03–337–0–17–154 (ಯೋಜನೆ) ರಾಜ್ಯ ಹೆದ್ದಾರಿ ರಸ್ತೆ ಸುಧಾರಣೆಗಳು (2019–20)** | | | | | | | | | |
| 1 | ಚಾಮರಾಜನಗರ | ಚಾಮರಾಜನಗರ | ಚಾಮರಾಜನಗರ | ಚಾಮರಾಜನಗರ ತಾ: ನಂಜನಗೂಡು – ಬಿ.ಆರ್.ಹಿಲ್ಸ್ ರಸ್ತೆ ರಾ.ಹೆ.80 ರಸ್ತೆಯ ಸ:38.10 ರಂದ 41.20 ಕಿ.ಮೀ ವರೆಗೆ ಉಳಿಕೆ ಕಾಮಗಾರಿ | 450.00 | 2.80 | – | 0.00 | ಎಲ್.ಡಿ.ಆರ್ 15.09.2022 (4ನೇ ಕರೆ) |
| | | | | | **450.00** | **2.80** | | **0.00** | |
| 1 | ಚಾಮರಾಜನಗರ | ಹನೂರು | ಹನೂರು | ಶ್ರೀರಂಗಪಟ್ಟಣ ಮಲೈಮಹದೇಶ್ವರ ಬೆಟ್ಟ ರಸ್ತೆಯ (ರಾಜ್ಯ ಹೆದ್ದಾರಿ–79 ) ಸ. 128.50 ರಿಂದ 145.00 ಕಿ.ಮೀವರೆಗೆ 21 ತೀವ್ರ ತಿರುವುಗಳನ್ನು ಅಭಿವೃದ್ಧಿಪಡಿಸುವ ಕಾಮಗಾರಿ (ತಾಳೆ ಬೆಟ್ಟದಿಂದ ಶ್ರೀ ಮಲೈಮಹದೇಶ್ವರ ಬೆಟ್ಟದವರೆಗೆ) (89025) | 200.00 | 1.35 | 1.35 | 200.71 | ಕಾಮಗಾರಿ ಮುಗಿದಿದೆ. (20.12.2019) |
| 2 | ಚಾಮರಾಜನಗರ | ಹನೂರು | ಹನೂರು | ಕೊಳ್ಳೇಗಾಲ ತಾ. ಶ್ರೀರಂಗಪಟ್ಟಣ–ಮಲೈಮಹದೇಶ್ವರ ಬೆಟ್ಟದ ರಸ್ತೆ (ರಾ.ಹೆ–79) ಸ: 106.00 ರಿಂದ 112.00 ಕಿಮೀ ವರೆಗೆ ( ರಾಮಾಪುರದಿಂದ ಕೌದಳ್ಳಿ) ರಸ್ತೆ ಅಭಿವೃದ್ಧಿ ಪಡಿಸುವುದು. (97852) | 500.00 | 6.00 | – | 0.00 | ಚರಂಡಿ ಕೆಲಸ ಪೂರ್ಣಗೊಂಡಿದೆ ಜಿ.ಎಸ್.ಬಿ ಶೇಕರಿಸಲಾಗುತ್ತಿದೆ (ರಾಮಾಪುರ ಗ್ರಾಮ ಪರಿಮಿತಿ 1.20 ಕಿ.ಮೀ) |

| | | | | | | | | | |
|---|---|---|---|---|---|---|---|---|---|
| 3 | ಚಾಮರಾಜನಗರ | ಹನೂರು | ಹನೂರು | ಕೊಳ್ಳೇಗಾಲ ತಾ. ಶ್ರೀರಂಗಪಟ್ಟಣ-ಮಲೈಮಹದೇಶ್ವರ ಬೆಟ್ಟದ ರಸ್ತೆ (ರಾ.ಹೆ-79) ಸ: 145.29 ರಿಂದ 146.14 ಕಿಮೀವರೆಗೆ (ಮಲೈ ಮಹದೇಶ್ವರ ಬೆಟ್ಟ ಮಾಸ್ಟರ್ ಪ್ಲಾನ್ ಆವರಣದಲ್ಲಿ ಚತುಷ್ಪತ) ರಸ್ತೆ ಅಭಿವೃದ್ಧಿ ಪಡಿಸುವುದು. (97853) | 450.00 | 0.85 | 0.85 | 265.76 | ಕಾಮಗಾರಿ ಪೂರ್ಣಗೊಂಡಿದೆ. |
| | | | | | **1150.00** | **8.20** | **2.20** | **466.47** | |
| **ರಾಜ್ಯ ಹೆದ್ದಾರಿ ರಸ್ತೆ ನವಿಕರಣ (2019-20)** | | | | | | | | | |
| | **ಯಾವುದೂ ಕಾಮಗಾರಿಗಳು ಇರುವುದಿಲ್ಲ** | | | | | | | | |
| **5054-04-337-0-01-154 ಜಿಲ್ಲಾ ಮತ್ತು ಇತರೆ ರಸ್ತೆಗಳು ಸುಧಾರಣೆ (2019-20)** | | | | | | | | | |
| 1 | ಚಾ.ನಗರ | ಗುಂಡ್ಲುಪೇಟೆ | ಚಾ.ನಗರ | (ಪ್ಯಾಕೇಜ್-5) 1. ಚಾಮರಾಜನಗರ ತಾ॥ ವೀರನಪುರ ಹರವೆ ಹೆಗ್ಗವಾಡಿ ಸೇರುವ ರಸ್ತೆ ಸ. 13.00 ರಿಂದ 15.60 ಕಿಮೀ 16.20 ರಿಂದ 17.00 ಕಿಮೀ ವರಗೆ ರಸ್ತೆ ಅಭಿವೃದ್ಧಿ ಕಾಮಗಾರಿ 2. ಚಾಮರಾಜನಗರ ತಾ॥ ಹಳೇಪುರದಿಂದ ಕಲ್ಪುರ ಮಾರ್ಗವಾಗಿ ಕಾಳನಹುಂಡಿ ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ 5.00 ಕಿಮೀ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ ( ಒಂದು ಬಾರಿ ಅಭಿವೃದ್ಧಿ ಪಡಿಸುವುದು) | 460.00 | 7.68 | 7.68 | 378.68 | ಕಾಮಗಾರಿ ಪೂರ್ಣಗೊಂಡಿದೆ |
| | | | | | 460.00 | 7.68 | 7.68 | 378.68 | |

| | | | | | | | | |
|---|---|---|---|---|---|---|---|---|
| 1 | ಚಾ.ನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | (ಪ್ಯಾಕೇಜ್-1) 1. ಗುಂಡ್ಲುಪೇಟೆ ತಾ॥ ಬೇಗೂರಿನಿಂದ ಬೆಳಚವಾಡಿ ಗ್ರಾಮಕ್ಕೆ ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ 1.70 ಕಿಮೀ ವರೆಗೆ ರಸ್ತೆ ಅಭಿವೃದ್ದಿ ಕಾಮಗಾರಿ(ಒಂದು ಬಾರಿ ಅಭಿವೃದ್ದಿ ಪಡಿಸುವುದು) 2.ಗುಂಡ್ಲುಪೇಟೆ ತಾ॥ ಹಸಗೂಲಿಯಿಂದ ಮಂಚಹಳ್ಳಿ ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ 4.00 ಕಿಮೀ ವರೆಗೆ ರಸ್ತೆ ಅಭಿವೃದ್ದಿ ಕಾಮಗಾರಿ ( ಒಂದು ಬಾರಿ ಅಭಿವೃದ್ದಿ ಪಡಿಸುವುದು) 3. ಗುಂಡ್ಲುಪೇಟೆ ತಾ॥ ರಾಷ್ಟ್ರೀಯ ಹೆದ್ದಾರಿ-766 ರಿಂದ ಅಗತಗೌಡನಹಳ್ಳಿ ಮಾರ್ಗವಾಗಿ ಹೆಗ್ಗವಾಡಿ ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ 3.20 ಕಿಮೀ ವರೆಗೆ ರಸ್ತೆ ಅಭಿವೃದ್ದಿ ಕಾಮಗಾರಿ( ಒಂದು ಬಾರಿ ಅಭಿವೃದ್ದಿ ಪಡಿಸುವುದು) | 445.00 | 8.90 | 8.90 | 445.58 | ಕಾಮಗಾರಿ ಪೂರ್ಣಗೊಂಡಿದೆ |
| 2 | ಚಾ.ನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | ಗುಂಡ್ಲುಪೇಟೆ ತಾ॥ ಕಡತಾಳಕಟ್ಟೆಹುಂಡಿ ಗ್ರಾಮದಿಂದ ದಾರಿಬೇಗೂರು ಮಾರ್ಗವಾಗಿ ಯರಿಯೂರು ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ 2.70 ಕಿಮೀ ವರೆಗೆ ರಸ್ತೆ ಅಭಿವೃದ್ದಿ ನಿರ್ಮಾಣ ಕಾಮಗಾರಿ ( ಒಂದು ಬಾರಿ ಅಭಿವೃದ್ದಿ ಪಡಿಸುವುದು) | 140.00 | 2.70 | 2.70 | 138.33 | ಕಾಮಗಾರಿ ಪೂರ್ಣಗೊಂಡಿದೆ |
| 3 | ಚಾ.ನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | ಗುಂಡ್ಲುಪೇಟೆ ತಾ॥ ಕಡತಾಳಕಟ್ಟೆಹುಂಡಿ ಗ್ರಾಮದಿಂದ ಕರಕಲಮಾದಹಳ್ಳಿ ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ 4.50 ಕಿಮೀ ವರೆಗೆ ರಸ್ತೆ ಅಭಿವೃದ್ದಿ ಕಾಮಗಾರಿ ( ಒಂದು ಬಾರಿ ಅಭಿವೃದ್ದಿ ಪಡಿಸುವುದು) | 100.00 | 4.50 | 4.50 | 87.06 | ಕಾಮಗಾರಿ ಪೂರ್ಣಗೊಂಡಿದೆ |
| 4 | ಚಾ.ನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | ಗುಂಡ್ಲುಪೇಟೆ ತಾ॥ ಬೇಗೂರು-ಕೌಲಂದೆ ರಸ್ತೆ ಸ. 13.50 ರಿಂದ 16.00 ಕಿಮೀ ವರೆಗೆ ರಸ್ತೆ ಅಭಿವೃದ್ದಿ ಪಡಿಸುವ ಕಾಮಗಾರಿ ( ಹರಳಿಕಟ್ಟೆ ಗ್ರಾಮ ಪರಿಮಿತಿ) | 145.00 | 2.50 | 2.50 | 96.19 | ಕಾಮಗಾರಿ ಪೂರ್ಣಗೊಂಡಿದೆ |

| | | | | | | | | | |
|---|---|---|---|---|---|---|---|---|---|
| 5 | ಚಾ.ನಗರ | ಗುಂಡ್ಲುಪೇಟೆ | ಗುಂಡ್ಲುಪೇಟೆ | (ಪ್ಯಾಕೇಜ್-4) 1.ಗುಂಡ್ಲುಪೇಟೆ ತಾ॥ ಹಾಲಹಳ್ಳಿಯಿಂದ ರಂಗನಾಥಪುರ ಸೇರುವ ಗ್ರಾಮೀಣ ರಸ್ತೆ ಸ. 1.45 ರಿಂದ 3.10 ಕಿಮೀ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ(ಒಂದು ಬಾರಿ ಅಭಿವೃದ್ಧಿ ಪಡಿಸುವುದು) 2. ಗುಂಡ್ಲುಪೇಟೆ ತಾ॥ ಕೆಲಸೂರಿನಿಂದ ಮಲ್ಲಮ್ಮನಹುಂಡಿ ಗ್ರಾಮದ ಮಾರ್ಗವಾಗಿ ಬೆರಟಹಳ್ಳಿ ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ2.40 ಕಿಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಸೇತುವೆ ನಿರ್ಮಾಣ ಕಾಮಗಾರಿ ( ಒಂದು ಬಾರಿ ಅಭಿವೃದ್ಧಿ ಪಡಿಸುವುದು) 3.ಗುಂಡ್ಲುಪೇಟೆ ತಾ॥ ಶಿಂಡನಪುರದಿಂದ ಕಂದೇಗಾಲ ಮಾರ್ಗವಾಗಿ ಕೊಡಸೋಗೆ ಸೇರುವ ಗ್ರಾಮೀಣ ರಸ್ತೆ ಸ. 0.00 ರಿಂದ 9.30 ಕಿಮೀ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ ( ಒಂದು ಬಾರಿ ಅಭಿವೃದ್ಧಿ ಪಡಿಸುವುದು) | 410.00 | 13.35 | 13.35 | 278.41 | ಕಾಮಗಾರಿ ಪೂರ್ಣಗೊಂಡಿದೆ |
| | | | | | 1240.00 | 31.95 | 31.95 | 1045.57 | |
| | | | | | 1700.00 | 39.63 | 39.63 | 1424.25 | |

**5054-04-337-0-01-160 ಯೋಜನೆ ಜಿಲ್ಲಾ ಮುಖ್ಯ ರಸ್ತೆ ನವೀಕರಣ (2019-20)**

| | | |
|---|---|---|
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | |

**ಲೆಕ್ಕ ಶೀರ್ಷಿಕೆ 4059-80-051-0-32-386 ನ್ಯಾಯಾಲಯ ಕಟ್ಟಡಗಳು (2019-20)**

| | | |
|---|---|---|
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | |

**ಲೆಕ್ಕ ಶೀರ್ಷಿಕೆ ಲೆಕ್ಕ ಶೀರ್ಷಿಕೆ 4216-01-700-2-24-386 (ಯೋಜನೆ) ನ್ಯಾಯಾಂಗ ಅಧಿಕಾರಿಗಳ ವಸತಿಗೃಹ (2019-20)**

| | | |
|---|---|---|
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | |

ರೂ: ಲಕ್ಷಗಳಲ್ಲಿ

## ಅನುಬಂಧ-01 (2020-21)

| ಕ್ರ.ಸಂ | ಜಿಲ್ಲೆ | ಕ್ಷೇತ್ರ | ತಾಲ್ಲೂಕು | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ ಲಕ್ಷಗಳಲ್ಲಿ) | ಅಭಿವೃದ್ಧಿ ಪಡಿಸಲು ಉದ್ದೇಶಿಸಿರುವ ಉದ್ದ (ಕಿ.ಮೀ ಗಳಲ್ಲಿ) | ಅಭಿವೃದ್ಧಿ ಪಡಿಸಲಾದ ಉದ್ದ (ಕಿ.ಮೀ ಗಳಲ್ಲಿ) | ಅನುದಾನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 11 |
| ರಾಜ್ಯ ಹೆದ್ದಾರಿ ರಸ್ತೆ ಸುಧಾರಣೆಗಳು (2020-21) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |
| ರಾಜ್ಯ ಹೆದ್ದಾರಿ ರಸ್ತೆ ಸುಧಾರಣೆಗಳು (2020-21) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |
| 5054-04-337-0-01-154 ಜಿಲ್ಲಾ ಮತ್ತು ಇತರೆ ರಸ್ತೆಗಳು ಸುಧಾರಣೆ (2020-21) | | | | | | | | | |
| 1 | ಚಾಮರಾಜನಗರ | ಚಾಮರಾಜನಗರ | ಚಾಮರಾಜನಗರ | ಚಾಮರಾಜನಗರ ತಾ॥ ಮೆಡಿಕಲ್ ಕಾಲೇಜು ರಸ್ತೆಯಿಂದ ಎಣ್ಣೆಹೊಳೆ ಗ್ರಾಮಕ್ಕೆ ಮತ್ತು ವಿಜಯ್ ಕುಮಾರ್ ಗುರುಜೀ ರವರ ಆಶ್ರಮಕ್ಕೆ ಅಪ್ರೋಚ್ ರಸ್ತೆ ಅಭಿವೃದ್ಧಿ ಪಡಿಸುವ ಕಾಮಗಾರಿ ( ಒಂದು ಬಾರಿ ಅಭಿವೃದ್ಧಿ ಪಡಿಸುವುದು) | 225.00 | 3.22 | 3.22 | 0.00 | ಕಾಮಗಾರಿ ಪೂರ್ಣಗೊಂಡಿದೆ |
| | | | | | 225.00 | 3.22 | 3.22 | 0.00 | |
| 1 | ಚಾ.ನಗರ | ಹನೂರು | ಹನೂರು | ಹನೂರು ತಾ॥ ಒಡೆಯರ್ ಪಾಳ್ಯದ ದೊಂಡೇಲಿನ್ ಟಿಬೆಟಿಯನ್ ಸೆಟ್‌ಲ್‌ಮೆಂಟ್ ರಸ್ತೆ ಅಭಿವೃದ್ಧಿ ಪಡಿಸುವ ಕಾಮಗಾರಿ (125892) | 200.00 | 2.60 | 2.60 | 0.00 | ಕಾಮಗಾರಿ ಪೂರ್ಣಗೊಂಡಿದೆ |
| 2 | ಚಾ.ನಗರ | ಕೊಳ್ಳೇಗಾಲ | ಯಳಂದೂರು | ಯಳಂದೂರು ತಾಲ್ಲೂಕು ಬಿಳಿಗಿರಂಗನಾಥಸ್ವಾಮಿ ಬೆಟ್ಟದಲ್ಲಿ ಬಾಗಲಕೋಟೆ-ಬಿ.ಆರ್.ಹಿಲ್ಸ್ ರಾಜ್ಯ ಹೆದಾರಿಯಿಂದ ಜಗದ್ಗುರು ಶ್ರೀ ಶಿವರಾತ್ರಿಶ್ವರ ಮಠಕ್ಕೆ ಹೋಗುವ ರಸ್ತೆ ಹಾಗೂ ಮಠದ ಆವರಣ ಅಭಿವೃದ್ಧಿ ಕಾಮಗಾರಿ. (ಗ್ರಾಮೀಣ ರಸ್ತೆ ಒಂದು ಬಾರಿ ಅಭಿವೃದ್ಧಿ) | 100.00 | 0.60 | 0.00 | 0.00 | ರಸ್ತೆ ಕಾಮಗಾರಿ ಪೂರ್ಣಗೊಂಡಿದ್ದು ಪಾರ್ಕಿಂಗ್, ವಿದ್ಯುಧೀಕರಣ ಕಾಮಗಾರಿ ಪ್ರಾರಂಬಿಸಬೇಕಾಗಿರುತ್ತದೆ. |
| | | | | | 300.00 | 3.20 | 0.00 | 0.00 | |
| | | | | | 525.00 | 6.42 | 3.22 | 0.00 | |
| 5054-04-337-0-01-160 ಯೋಜನೆ ಜಿಲ್ಲಾ ಮುಖ್ಯ ರಸ್ತೆ ನವೀಕರಣ (2020-21) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |

| | | | | | | | | | |
|---|---|---|---|---|---|---|---|---|---|
| ಲೆಕ್ಕ ಶೀರ್ಷಿಕೆ 4059-80-051-0-32-386 ನ್ಯಾಯಾಲಯ ಕಟ್ಟಡಗಳು (2020-21) | | | | | | | | | |
| 1 | ಗುಂಡ್ಲುಪೇಟೆ | ಗುಂಡ್ಲುಪೇಟೆ | ಗುಂಡ್ಲುಪೇಟೆ | Construction of First floor (Phase-II) Building to existing Court Complex building at Gundlupete (change of Work) | 85.50 | - | - | 85.50 | ತಾಂತ್ರಿಕ ಬಿಡ್ ವೃತ್ತ ಕಛೇರಿಯಲ್ಲಿ ಪರಿಶೀಲನೆಯಲ್ಲಿದೆ |
| | | | | | 85.50 | | | 85.50 | |
| ಲೆಕ್ಕ ಶೀರ್ಷಿಕೆ ಲೆಕ್ಕ ಶೀರ್ಷಿಕೆ 4216-01-700-2-24-386 (ಯೋಜನೆ) ನ್ಯಾಯಾಂಗ ಅಧಿಕಾರಿಗಳ ವಸತಿಗೃಹ (2020-21) | | | | | | | | | |
| 1 | ಗುಂಡ್ಲುಪೇಟೆ | ಗುಂಡ್ಲುಪೇಟೆ | ಗುಂಡ್ಲುಪೇಟೆ | Construction of -4 Nos. of Judges quarters in Gundlupete in the existing Court complex (Change of Work) | 400.00 | - | - | 400.00 | ಅಂದಾಜು ಪಟ್ಟಿ ತಾಂತ್ರಿಕ .ಮಂಜೂರಾತಿ ಹಂತದಲ್ಲಿದೆ. |
| | | | | | 400.00 | | | 400.00 | |

ರೂ: ಲಕ್ಷಗಳಲ್ಲಿ

## ಅನುಬಂಧ-01 (2021-22)

| ಕ್ರಸಂ | ಜಿಲ್ಲೆ | ಕ್ಷೇತ್ರ | ತಾಲ್ಲೂಕು | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ ಲಕ್ಷಗಳಲ್ಲಿ) | ಅಭಿವೃದ್ಧಿ ಪಡಿಸಲು ಉದ್ದೇಶಿಸಿರುವ ಉದ್ದ (ಕಿ.ಮೀ ಗಳಲ್ಲಿ) | ಅಭಿವೃದ್ಧಿ ಪಡಿಸಲಾದ ಉದ್ದ (ಕಿ.ಮೀ ಗಳಲ್ಲಿ) | ಅನುದಾನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 11 |
| ರಾಜ್ಯ ಹೆದ್ದಾರಿ ರಸ್ತೆ ಸುಧಾರಣೆಗಳು (2021-22) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |
| ರಾಜ್ಯ ಹೆದ್ದಾರಿ ರಸ್ತೆ ನವಿಕರಣ (2021-22) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |
| 5054-04-337-0-01-154 ಜಿಲ್ಲಾ ಮತ್ತು ಇತರೆ ರಸ್ತೆಗಳು ಸುಧಾರಣೆ (2021-22) | | | | | | | | | |
| 1 | ಚಾಮರಾಜನಗರ | ಗುಂಡ್ಲುಪೇಟೆ | ಚಾಮರಾಜನಗರ | ಚಾಮರಾಜನಗರ ಜಿಲ್ಲೆ ಮತ್ತು ತಾಲ್ಲೂಕು ಹರವೆ ಹೋಬಳಿ ಮಲೆಯೂರು ಗ್ರಾಮದಿಂದ ಕುಲಗಾಣಕ್ಕೆ ಗ್ರಾಮದವರೆಗೆ 5.00 ಕಿ.ಮೀ ವರೆಗೆ ರಸ್ತೆ ಡಾಂಬರೀಕರಣ | 150.00 | 5.00 | 0.00 | 150.00 | ಟೆಂಡರ್ ಪ್ರಕ್ರಿಯೆಯಲ್ಲಿರುತ್ತದೆ |
| 2 | ಚಾಮರಾಜನಗರ | ಗುಂಡ್ಲುಪೇಟೆ | ಚಾಮರಾಜನಗರ | ಚಾಮರಾಜನಗರ ಜಿಲ್ಲೆ ಮತ್ತು ತಾಲ್ಲೂಕು ಹರವೆ ಹೋಬಳಿ ಹಿರೀಬೇಗೂರು ಗ್ರಾಮದಿಂದ ಅರಳೀಕಟ್ಟೆ ಗ್ರಾಮದವರೆಗೆ 2.00 ಕಿ.ಮೀ ವರೆಗೆ ರಸ್ತೆ ಡಾಂಬರೀಕರಣ | 150.00 | 2.00 | 0.00 | 150.00 | ಟೆಂಡರ್ ಪ್ರಕ್ರಿಯೆಯಲ್ಲಿರುತ್ತದೆ |
| | | | | | 300.00 | 7.00 | 0.00 | 300.00 | |
| 5054-04-337-0-01-160 ಯೋಜನೆ ಜಿಲ್ಲಾ ಮುಖ್ಯ ರಸ್ತೆ ನವೀಕರಣ (2021-22) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |
| ಲೆಕ್ಕ ಶೀರ್ಷಿಕೆ 4059-80-051-0-32-386 ನ್ಯಾಯಾಲಯ ಕಟ್ಟಡಗಳು (2021-22) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |
| ಲೆಕ್ಕ ಶೀರ್ಷಿಕೆ ಲೆಕ್ಕ ಶೀರ್ಷಿಕೆ 4216-01-700-2-24-386 (ಯೋಜನೆ) ನ್ಯಾಯಾಂಗ ಅಧಿಕಾರಿಗಳ ವಸತಿಗೃಹ (2021-22) | | | | | | | | | |
| | ಯಾವುದೂ ಕಾಮಗಾರಿಗಳು ಇರುವುದಿಲ್ಲ | | | | | | | | |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 129 |
| ಸದಸ್ಯರ ಹೆಸರು | ಶ್ರೀ ನರೇಂದ್ರ ಆರ್ (ಹನೂರು) |
| ಉತ್ತರಿಸುವ ದಿನಾಂಕ | 12-09-2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಹನೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಮುಜರಾಯಿ ಹಾಗೂ ಮುಜರಾಯಿಯೇತರ ದೇವಸ್ಥಾನಗಳೆಷ್ಟು; (ಅವುಗಳ ಸ್ಥಳ ವಿವರವನ್ನು ಪ್ರತ್ಯೇಕವಾಗಿ ನೀಡುವುದು) | ಚಾಮರಾಜನಗರ ಜಿಲ್ಲೆಯ ಹನೂರು ವಿಧಾನ ಸಭಾ ವ್ಯಾಪ್ತಿಗೆ ಬರುವ ಹನೂರು ತಾಲ್ಲೂಕು ಮತ್ತು ಕೊಳ್ಳೇಗಾಲ ತಾಲ್ಲೂಕಿನಲ್ಲಿ ಒಟ್ಟು **86** ಅಧಿಸೂಚಿತ ದೇವಾಲಯಗಳಿವೆ<br>ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ.<br>ಮುಜರಾಯೇತರ ದೇವಾಲಯಗಳು ಹಿಂದೂ ಧಾರ್ಮಿಕ ದತ್ತಿ ಇಲಾಖೆಗೆ ಒಳಪಡದೆ ಇರುವುದರಿಂದ ಮಾಹಿತಿ ಇರುವುದಿಲ್ಲ. |
| ಆ) | ಕಳೆದ 03 ವರ್ಷಗಳಿಂದ ಇಲ್ಲಿಯವರೆಗೂ ಈ ದೇವಾಲಯಗಳ ಜೀರ್ಣೋದ್ಧಾರಕ್ಕೆ ಸರ್ಕಾರ ಯಾವುದೇ ಅನುದಾನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಅನುದಾನ ನೀಡಿದೆ.<br>ಕಳೆದ 03 ವರ್ಷಗಳಿಂದ ಇಲ್ಲಿಯವರೆಗೂ ಹನೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ಈ ಕೆಳಕಂಡ ಯೋಜನೆಯಡಿ ಒಟ್ಟು **ರೂ.102.75ಲಕ್ಷಗಳ** ಅನುದಾನ ಬಿಡುಗಡೆ ಮಾಡಲಾಗಿದೆ. ವಿವರಗಳು ಈ ಕೆಳಕಂಡಂತಿದೆ. |

**ರೂ.ಲಕ್ಷಗಳಲ್ಲಿ**

| ಯೋಜನೆ | 2019-20 | 2020-21 | 2021-22 | ಒಟ್ಟು |
|---|---|---|---|---|
| ದುರಸ್ತಿ/ಜೀರ್ಣೋದ್ಧಾರ/ನಿರ್ಮಾಣ | - | 52.00 | - | **52.00** |
| ಆರಾಧನಾ ಯೋಜನೆ | 4.24 | 3.30 | 3.30 | **10.84** |
| ಪರಿಶಿಷ್ಟ ಜಾತಿ ಉಪಯೋಜನೆ | 6.76 | 5.28 | 5.28 | **17.32** |
| ಗಿರಿಜನ ಉಪ ಯೋಜನೆ | 1.01 | 0.79 | 0.79 | **2.59** |
| ಅನುಸೂಚಿತ ಜಾತಿ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆ-2013ರಡಿ ಟಿ.ಎಸ್.ಪಿ ಕಾರ್ಯಕ್ರಮಕ್ಕಾಗಿ | - | - | 20.00 | **20.00** |
| ಒಟ್ಟು | **12.01** | **61.37** | **29.37** | **102.75** |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಬಂದಿದ್ದಲ್ಲಿ ಈ ದೇವಾಲಯಗಳ ಜೀರ್ಣೋದ್ಧಾರಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಮೇಲ್ಕಂಡಂತೆ ಹನೂರು ವಿಧಾನ ಸಭಾ ಕ್ಷೇತ್ರಕ್ಕೆ ದುರಸ್ತಿ/ ಜೀರ್ಣೋದ್ಧಾರ/ ನಿರ್ಮಾಣ ಯೋಜನೆ ಅಡಿ ಬಿಡುಗಡೆಯಾಗಿರುವ ಅನುದಾನವನ್ನು ಯೋಜನೆವಾರು ಹೊರಡಿಸಿರುವ ಮಾರ್ಗಸೂಚಿಗಳನ್ವಯ ಜಿಲ್ಲಾಧಿಕಾರಿ, ಚಾಮರಾಜನಗರ ಇವರು ದೇವಾಲಯದ ಅಭಿವೃದ್ಧಿ ಕಾಮಗಾರಿಗೆ ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಿರುತ್ತಾರೆ.<br>ಆರಾಧನಾ/ (ಪರಿಶಿಷ್ಟ ಜಾತಿ ಗಿರಿಜನ ಉಪಯೋಜನೆ)ಗಳ ಅಡಿಯಲ್ಲಿ ಬಿಡುಗಡೆಯಾದ ಅನುದಾನವನ್ನು ನಿರ್ಮಿತಿ ಕೇಂದ್ರ ಚಾಮರಾಜನಗರ ಜಿಲ್ಲೆ ಇಲ್ಲಿ ಠೇವಣಿ ಇರಿಸಲಾಗಿದ್ದು, ಹನೂರು ವಿಧಾನ ಸಭಾ ಕ್ಷೇತ್ರದ ಯೋಜನೆವಾರು/ಗ್ರಾಮವಾರು ಪಟ್ಟಿಯಲ್ಲಿ ಸಲ್ಲಿಸಲು ತಹಶೀಲ್ದಾರ್ ಕೊಳ್ಳೇಗಾಲ ರವರು ಕೋರಿರುವ ಮೇರೆಗೆ |

.....2

| | | |
|---|---|---|
| | | ಮಾನ್ಯ ಶಾಸಕರಿಂದ ಪ್ರಸ್ತಾವನೆ ಬಾಕಿ ಇದ್ದು, ಸದರಿಯವರಿಂದ ಯೋಜನಾವಾರು ಕಾಮಗಾರಿ ಪಟ್ಟಿ ಸ್ವೀಕೃತವಾದ ಕೂಡಲೇ, ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡಲಾಗುವುದು ಎಂಬುದಾಗಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರು ತಿಳಿಸಿರುತ್ತಾರೆ. |
| ಈ) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಚಾಮರಾಜನಗರ ಜಿಲ್ಲೆಗೆ ಮುಜರಾಯಿ ಇಲಾಖೆಯ ವತಿಯಿಂದ ದೇವಸ್ಥಾನಗಳ ಜೀರ್ಣೋದ್ಧಾರ/ಅಭಿವೃದ್ಧಿಗಾಗಿ ನೀಡಿರುವ ಅನುದಾನವೆಷ್ಟು? (ವಿಧಾನಸಭಾ ಕ್ಷೇತ್ರವಾರು ಪ್ರತ್ಯೇಕವಾಗಿ ವಿವರ ನೀಡುವುದು) | ಮುಜರಾಯಿ ಇಲಾಖೆಯು ದೇವಸ್ಥಾನಗಳ ಜೀರ್ಣೋದ್ಧಾರ/ ಅಭಿವೃದ್ಧಿಗಾಗಿ **ರೂ.761.52ಲಕ್ಷಗಳ** ಅನುದಾನ ಮಂಜೂರು ಮಾಡಲಾಗಿದೆ. ವಿವರ ಕೆಳಕಂಡಂತಿದೆ. |

**ರೂ.ಲಕ್ಷಗಳಲ್ಲಿ**

| ಯೋಜನೆ | 2019-20 | 2020-21 | 2021-22 | ಒಟ್ಟು |
|---|---|---|---|---|
| ದುರಸ್ಥಿ/ಜೀರ್ಣೋದ್ಧಾರ/ನಿರ್ಮಾಣ | 59.00 | 389.50 | 40.00 | **488.50** |
| ಆರಾಧನಾ ಯೋಜನೆ | 16.96 | 13.20 | 13.20 | **43.36** |
| ಪರಿಶಿಷ್ಟ ಜಾತಿ ಉಪಯೋಜನೆ | 27.04 | 21.12 | 21.12 | **69.28** |
| ಗಿರಿಜನ ಉಪ ಯೋಜನೆ | 4.06 | 3.16 | 3.16 | **10.38** |
| ಅನುಸೂಚಿತ ಜಾತಿ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆ-2013ರಡಿ ಟಿ.ಎಸ್.ಪಿ ಕಾರ್ಯಕ್ರಮಕ್ಕಾಗಿ | | | 150.00 | **150.00** |
| **ಒಟ್ಟು** | **107.06** | **426.98** | **227.48** | **761.52** |

ವಿಧಾನಸಭಾ ಕ್ಷೇತ್ರವಾರು ಮಾಹಿತಿಯು ಅನುಬಂಧ-2ರಲ್ಲಿ ಒದಗಿಸಿದೆ.

ಸಂಖ್ಯೆ: ಕಂಇ 139 ಮುಸಪ್ರ 2022

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು

ಅನುಬಂಧ - 1

| ಕೊಳ್ಳೇಗಾಲ ಮತ್ತು ಹನೂರು ತಾಲ್ಲೂಕಿನಲ್ಲಿರುವ ದೇವಾಲಯಗಳ ವಿವರ : | | |
|---|---|---|
| 1 | ರಂಗನಾಥ ಸ್ವಾಮಿ ದೇವಸ್ಥಾನ ಮತ್ತು ಸಮೂಹ ದೇವಾಲಯಗಳು | ಶಿವನಸಮುದ್ರ |
| 2 | ಶ್ರೀಬಸವೇಶ್ವರಸ್ವಾಮಿ ದೇವಸ್ಥಾನ | ಕೆಂಪನ ಪಾಳ್ಯ |
| 3 | ಶ್ರೀ ಮಾರಿಯಮ್ಮ ದೇವಸ್ಥಾನ | ಕುಣಗಳ್ಳಿ |
| 4 | ಶ್ರೀ ವರದರಾಜುಸ್ವಾಮಿ ದೇವಸ್ಥಾನ | ದಾಸನಪುರ |
| 5 | ಶ್ರೀ ಮಾರಮ್ಮ ದೇವಸ್ಥಾನ | ಕೊಳ್ಳೇಗಾಲ |
| 6 | ಶ್ರೀ ಚಾವಡಿ ವಿನಾಯಕಸ್ವಾಮಿ ದೇವಸ್ಥಾನ | ಕೊಳ್ಳೇಗಾಲ |
| 7 | ಶ್ರೀ ಬಲಮುರಿ ವಿನಾಯಕಸ್ವಾಮಿ ದೇವಸ್ಥಾನ | ಕೊಳ್ಳೇಗಾಲ |
| 8 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಕೊಳ್ಳೇಗಾಲ |
| 9 | ಶ್ರೀ ಮಾರಮ್ಮ ದೇವಸ್ಥಾನ | ಹಂಪಾಪುರ |
| 10 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಮುಳ್ಳೂರು |
| 11 | ಶ್ರೀ ಕಲ್ಯಾಣ ಬಸವೇಶ್ವರಸ್ವಾಮಿ ದೇವಸ್ಥಾನ | ಸತ್ತೇಗಾಲ |
| 12 | ಶ್ರೀ ಜಲಕಂಠೇಶ್ವರಸ್ವಾಮಿ ದೇವಸ್ಥಾನ | ಶಾಗ್ಯ |
| 13 | ಶ್ರೀ ಚನ್ನಿಗರಾಯಸ್ವಾಮಿ ದೇವಸ್ಥಾನ | ಬಂಡಳ್ಳಿ |
| 14 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಆಲಹಳ್ಳಿ |
| 14 | ಶ್ರೀ ಶಿವಾಲಂಕೇಶ್ವರ ದೇವಸ್ಥಾನ | ಕಣ್ಣೂರು |
| 15 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಹೊಸಮಾಲಂಗಿ |
| 16 | ಶ್ರೀ ಶಂಭುಲಿಂಗೇಶ್ವರಸ್ವಾಮಿ ದೇವಸ್ಥಾನ | ಚಿಲಕವಾಡಿ |
| 17 | ಶ್ರೀ ವೀರಭದ್ರಸ್ವಾಮಿ ದೇವಸ್ಥಾನ | ಚಿಲಕವಾಡಿ |
| 18 | ಶ್ರೀ ಮಹದೇಶ್ವರಸ್ವಾಮಿ ದೇವಸ್ಥಾನ | ಲೊಕ್ಕನಹಳ್ಳಿ |
| 19 | ಶ್ರೀ ಪೆರುಮಾಳಸ್ವಾಮಿ ದೇವಸ್ಥಾನ | ಲೊಕ್ಕನಹಳ್ಳಿ |
| 20 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಲೊಕ್ಕನಹಳ್ಳಿ |

| | | |
|---|---|---|
| 21 | ಶ್ರೀ ಮಾರಮ್ಮ ದೇವಸ್ಥಾನ | ಲೊಕ್ಕನಹಳ್ಳಿ |
| 22 | ಶ್ರೀ ವಿನಾಯಕಸ್ವಾಮಿ ದೇವಸ್ಥಾನ | ಲೊಕ್ಕನಹಳ್ಳಿ |
| 23 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಕಣ್ಣೂರು |
| 24 | ಶ್ರೀ ಮಾರಮ್ಮ ದೇವಸ್ಥಾನ | ಕಣ್ಣೂರು |
| 25 | ಶ್ರೀ ಮಲ್ಯೆಗವಿ ಬಸವೇಶ್ವರಸ್ವಾಮಿ ದೇವಸ್ಥಾನ | ಹೊಂಡರಬಾಳು |
| 26 | ಶ್ರೀ ಸಿದ್ದೇಶ್ವರಸ್ವಾಮಿ ದೇವಸ್ಥಾನ | ಹೊಂಡರಬಾಳು |
| 27 | ಶ್ರೀದೊಡ್ಡಗವಿಬಸವೇಶ್ವರಸ್ವಾಮಿ ದೇವಸ್ಥಾನ | ಹೊಂಡರಬಾಳು |
| 28 | ಶ್ರೀ ವೀರಭದ್ರಸ್ವಾಮಿ ದೇವಸ್ಥಾನ | ಹೊಂಡರಬಾಳು |
| 29 | ಶ್ರೀ ಗೋಪಾಲಸ್ವಾಮಿ ದೇವಸ್ಥಾನ | ಪಾಳ್ಯ |
| 30 | ಶ್ರೀಮೋತರಾಜೇಶ್ವರಸ್ವಾಮಿ ದೇವಸ್ಥಾನ | ಪಾಳ್ಯ |
| 31 | ಶ್ರೀ ವಿನಾಯಕಸ್ವಾಮಿ ದೇವಸ್ಥಾನ | ಪಾಳ್ಯ |
| 32 | ಶ್ರೀ ರಾಮನಾಥಸ್ವಾಮಿ ದೇವಸ್ಥಾನ | ಪಾಳ್ಯ |
| 33 | ಶ್ರೀ ಸೋಮೇಶ್ವರಸ್ವಾಮಿ ದೇವಸ್ಥಾನ | ಪಾಳ್ಯ |
| 34 | ಶ್ರೀ ಸೀಗೇಮಾರಮ್ಮ ದೇವಸ್ಥಾನ | ಪಾಳ್ಯ |
| 35 | ಶ್ರೀ ಮರಳೇಶ್ವರಸ್ವಾಮಿ ದೇವಸ್ಥಾನ | ಪಾಳ್ಯ |
| 36 | ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಸ್ಥಾನ | ಹಂಪಾಪುರ |
| 37 | ಶ್ರೀ ಹನುಮಂತೇಶ್ವರಸ್ವಾಮಿ ದೇವಸ್ಥಾನ | ಅಜ್ಜೀಪುರ |
| 38 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಚಿಂಚಳ್ಳಿ |
| 39 | ಶ್ರೀ ಆಂಜನೇಯಸ್ವಾಮಿ ದೇವಸ್ಥಾನ | ಹನೂರು |
| 40 | ಶ್ರೀ ಬಿಸಿಲು ಮಾರಮ್ಮ ದೇವಸ್ಥಾನ | ಬಂಡಳ್ಳಿ |
| 41 | ಶ್ರೀ ಮಾರಮ್ಮ ದೇವಸ್ಥಾನ | ಆಲಹಳ್ಳಿ |
| 42 | ಶ್ರೀ ಮಾರಮ್ಮ ದೇವಸ್ಥಾನ | ಕುಂತೂರು |
| 43 | ಶ್ರೀ ಹನುಮಂತರಾಯ ಸ್ವಾಮಿ ದೇವಸ್ಥಾನ | ಕುಣಗಳ್ಳಿ |

| | | |
|---|---|---|
| 44 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಕುಣಗಳ್ಳಿ |
| 45 | ಶ್ರೀ ನಡುಕೇರಿ ಬಸವೇಶ್ವರಸ್ವಾಮಿ ದೇವಸ್ಥಾನ | ಕುಣಗಳ್ಳಿ |
| 46 | ಶ್ರೀ ಮಡೆಮಾರಮ್ಮ ದೇವಸ್ಥಾನ | ಕುಣಗಳ್ಳಿ |
| 47 | ಶ್ರೀ ಅಮೃತೇಶ್ವರಸ್ವಾಮಿ ದೇವಸ್ಥಾನ | ಗುಂಡೇಗಾಲ |
| 48 | ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಸ್ಥಾನ | ಸರಗೂರು |
| 49 | ಶ್ರೀ ಮಾರಮ್ಮ ದೇವಸ್ಥಾನ | ಸರಗೂರು |
| 50 | ಶ್ರೀ ವೀರಭದ್ರಸ್ವಾಮಿ ದೇವಸ್ಥಾನ | ಉಗನಿಯ |
| 51 | ಶ್ರೀ ಅರ್ಕೇಶ್ವರಸ್ವಾಮಿ ದೇವಸ್ಥಾನ | ಉಗನಿಯ |
| 52 | ಶ್ರೀ ಹನುಮಂತರಾಯ ಸ್ವಾಮಿ ದೇವಸ್ಥಾನ | ಸಿಂಗಾನಲ್ಲೂರು |
| 53 | ಶ್ರೀ ಶಂಭುಲಿಂಗೇಶ್ವರಸ್ವಾಮಿ ಮತ್ತು ಶ್ರೀ ವೀರಭದ್ರಸ್ವಾಮಿ ದೇವಸ್ಥಾನ | ಸಿಂಗಾನಲ್ಲೂರು |
| 54 | ಶ್ರೀ ಸತ್ಯದೇವತೆ ದೇವಸ್ಥಾನ | ಇಕ್ಕಡಹಳ್ಳಿ |
| 55 | ಶ್ರೀ ಮಹದೇಶ್ವರಸ್ವಾಮಿ ದೇವಸ್ಥಾನ | ಇಕ್ಕಡಹಳ್ಳಿ |
| 56 | ಶ್ರೀ ಮಾರಮ್ಮ ದೇವಸ್ಥಾನ | ಇಕ್ಕಡಹಳ್ಳಿ |
| 57 | ಶ್ರೀ ಬ್ರಹ್ಮೇಶ್ವರಸ್ವಾಮಿ ದೇವಸ್ಥಾನ | ಇಕ್ಕಡಹಳ್ಳಿ |
| 58 | ಶ್ರೀ ಹನುಮಂತೇಶ್ವರಸ್ವಾಮಿ ದೇವಸ್ಥಾನ | ಇಕ್ಕಡಹಳ್ಳಿ |
| 59 | ಶ್ರೀ ಮಹದೇಶ್ವರಸ್ವಾಮಿ ದೇವಸ್ಥಾನ | ಚಿಕ್ಕಿಂದುವಾಡಿ |
| 60 | ಶ್ರೀ ಮಾಳಗರಸಮ್ಮ ದೇವಸ್ಥಾನ | ಮುಳ್ಳೂರು |
| 61 | ಶ್ರೀ ನಾರಾಯಣಸ್ವಾಮಿ ದೇವಸ್ಥಾನ | ಮುಡಿಗುಂಡ |
| 62 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಉತ್ತಂಬಳ್ಳಿ |
| 63 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಚಿಲಕವಾಡಿ |
| 64 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಮುಡಿಗುಂಡ |
| 65 | ಶ್ರೀ ಹನುಮಂತರಾಯ ಸ್ವಾಮಿ ದೇವಸ್ಥಾನ | ಮುಡಿಗುಂಡ |
| 66 | ಶ್ರೀ ಮುಳ್ಳಾಚಮ್ಮ ದೇವಸ್ಥಾನ | ಮುಡಿಗುಂಡ |

| | | |
|---|---|---|
| 67 | ಶ್ರೀ ಮಾರಮ್ಮ ದೇವಸ್ಥಾನ | ಹೊಸಮಾಲಂಗಿ |
| 68 | ಶ್ರೀ ಮಾರಮ್ಮ ದೇವಸ್ಥಾನ | ತಿಮ್ಮರಾಜಿಪುರ |
| 69 | ಶ್ರೀ ವೀರಭದ್ರೇಶ್ವರಸ್ವಾಮಿ ದೇವಸ್ಥಾನ | ಜಕ್ಕಳ್ಳಿ |
| 70 | ಶ್ರೀ ಕಾಮದೇವರು ದೇವಸ್ಥಾನ | ಮುಳ್ಳೂರು |
| 71 | ಶ್ರೀ ಶಿವಾಚಾರ್ ಮಠ | ಬಂಡಳ್ಳಿ |
| 72 | ಶ್ರೀ ನೀಲಕಂಠಸ್ವಾಮಿ ದೇವಸ್ಥಾನ | ಹೊಂಡರಬಾಳು |
| 73 | ಶ್ರೀ ವಿನಾಯಕಸ್ವಾಮಿ ದೇವಸ್ಥಾನ | ಕುಂತೂರು |
| 74 | ಶ್ರೀ ಜನಾರ್ಧನಸ್ವಾಮಿ ದೇವಸ್ಥಾನ | ದಾಸನಪುರ |
| 75 | ಶ್ರೀ ವರದರಾಜಸ್ವಾಮಿ ಸಮೂಹ ದೇವಸ್ಥಾನ | ಸತ್ತೇಗಾಲ |
| 76 | ಶ್ರೀ ಮರಳೇಶ್ವರಸ್ವಾಮಿ ದೇವಸ್ಥಾನ | ಕೊಳ್ಳೇಗಾಲ |
| 77 | ಶ್ರೀ ಲಕ್ಷ್ಮಿನಾರಾಯಣಸ್ವಾಮಿ ದೇವಸ್ಥಾನ | ಕೊಳ್ಳೇಗಾಲ |
| 78 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಮಧುವನಹಳ್ಳಿ |
| 79 | ಶ್ರೀ ದೂರಿಬಸವೇಶ್ವರಸ್ವಾಮಿ ದೇವಸ್ಥಾನ | ಹೊಂಡರಬಾಳು |
| 80 | ಶ್ರೀ ಬೀರೇದೇವರ ದೇವಸ್ಥಾನ | ಗುಂಡೇಗಾಲ |
| 81 | ಶ್ರೀ ಮಾರಮ್ಮ ದೇವಸ್ಥಾನ | ತೆಳ್ಳನೂರು |
| 82 | ಶ್ರೀ ಗೋಪಾಲಸ್ವಾಮಿ ದೇವಸ್ಥಾನ | ತೆಳ್ಳನೂರು |
| 83 | ಶ್ರೀ ರಾವಳೇಶ್ವರಸ್ವಾಮಿ ದೇವಸ್ಥಾನ | ಚಿಕ್ಕಲ್ಲೂರು |
| 84 | ಶ್ರೀ ಬಸವೇಶ್ವರಸ್ವಾಮಿ ದೇವಸ್ಥಾನ | ಹರಳೆ |
| 85 | ಶ್ರೀ ಮಾರಮ್ಮ ದೇವಸ್ಥಾನ | ಹರಳೆ |
| 86 | ಶ್ರೀ ಬಸವೇಶ್ವರ ಮತ್ತು ಅಗಸ್ತೇಶ್ವರಸ್ವಾಮಿ ದೇವಸ್ಥಾನ | ದಾಸನಪುರ |

ಅನುಬಂಧ - ೩

ಜಿಲ್ಲೆ :- ಚಾಮರಾಜನಗರ

| ಯೋಜನೆ | ಚಾಮರಾಜನಗರ | | | ಹನೂರು | | | ಕೊಳ್ಳೇಗಾಲ | | | ಗುಂಡ್ಲುಪೇಟೆ | | | ಎಲ್ಲಾ ಒಟ್ಟು |
|---|---|---|---|---|---|---|---|---|---|---|---|---|---|
| ಸಾಲು | 19-20 | 20-21 | 21-22 | 19-20 | 20-21 | 21-22 | 19-20 | 20-21 | 21-22 | 19-20 | 20-21 | 21-22 | |
| ದೇವಾಲಯ / ಮಠಗಳ ದುರಸ್ತಿ/ಜೀರ್ಣೋದ್ಧಾರ/ನಿರ್ಮಾಣ | 59.00 | 50.00 | 0.00 | 0.00 | 52.00 | 0.00 | 0.00 | 5.00 | 0.00 | 0.00 | 282.50 | 40.00 | **488.50** |
| ಆರಾಧನಾ ಯೋಜನೆ | 4.24 | 3.30 | 3.30 | 4.24 | 3.30 | 3.30 | 4.24 | 3.30 | 3.30 | 4.24 | 3.30 | 3.30 | **43.36** |
| ಪರಿಶಿಷ್ಟ ಜಾತಿ ಉಪಯೋಜನೆ | 6.76 | 5.28 | 5.28 | 6.76 | 5.28 | 6.16 | 6.76 | 5.28 | 4.40 | 6.76 | 5.28 | 5.28 | **69.28** |
| ಗಿರಿಜನ ಉಪಯೋಜನೆ | 1.015 | 0.79 | 0.79 | 1.015 | 0.79 | 0.79 | 1.015 | 0.79 | 0.79 | 1.015 | 0.79 | 0.79 | **10.38** |
| ಟಿ.ಎಸ್.ಪಿ ವಿಶೇಷ ಯೋಜನೆಯಡಿ | 0.00 | 0.00 | 10.00 | 0.00 | 0.00 | 20.00 | 0.00 | 0.00 | 30.00 | 0.00 | 0.00 | 90.00 | **150.00** |

ಜಿಲ್ಲಾಧಿಕಾರಿಗಳ ಪರವಾಗಿ,
ಚಾಮರಾಜನಗರ ಜಿಲ್ಲೆ, ಚಾಮರಾಜನಗರ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 13 |
| ವಿಧಾನ ಸಭೆ ಸದಸ್ಯರು | : | ಶ್ರೀ.ನಿಸರ್ಗ ನಾರಾಯಣ ಸ್ವಾಮಿ.ಎಲ್.ಎನ್. (ದೇವನಹಳ್ಳಿ) |
| ಉತ್ತರಿಸುವ ದಿನಾಂಕ | : | 12.09.2022 |
| ಉತ್ತರಿಸುವ ಸಚಿವರು | : | ಪಶುಸಂಗೋಪನಾ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ದೇವನಹಳ್ಳಿ ವಿಧಾನ ಸಭಾ ಕ್ಷೇತ್ರಕ್ಕೆ ಪಶುಚಿಕಿತ್ಸಾ ಕೇಂದ್ರಗಳ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ 75,590 ಜಾನುವಾರು ಘಟಕಗಳಿದ್ದು, ರಾಷ್ಟ್ರೀಯ ಕೃಷಿ ಆಯೋಗದ ಮಾರ್ಗಸೂಚಿಯಂತೆ ಪ್ರತಿ 5000 ಜಾನುವಾರು ಘಟಕಗಳಿಗೆ 01 ಪಶುವೈದ್ಯಕೀಯ ಸಂಸ್ಥೆ ಇರಬೇಕಾಗಿದ್ದು, ಇವುಗಳ ಸೂಕ್ತ ಚಿಕಿತ್ಸೆಗಾಗಿ ಪ್ರಸ್ತುತ 26 ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. |
| ಆ) | ಬಂದಿದ್ದಲ್ಲಿ, 2022-23 ನೇ ಸಾಲಿನ ಆಯವ್ಯಯದಲ್ಲಿ ಹೊಸ ಪಶುಚಿಕಿತ್ಸಾ ಕೇಂದ್ರಗಳ ಸ್ಥಾಪನೆ ಬಗ್ಗೆ ಘೋಷಿಸಲಾಗಿದೆಯೇ; ಘೋಷಣೆ ಮಾಡಿದ್ದರೆ ಎಷ್ಟು ಪಶುಚಿಕಿತ್ಸಾ ಕೇಂದ್ರಗಳನ್ನು ಮಂಜೂರು ಮಾಡಲಾಗುವುದು; (ವಿವರ ನೀಡುವುದು) | 2022-23 ನೇ ಸಾಲಿನ ಆಯವ್ಯಯದಲ್ಲಿ 100 ಹೊಸ ಪಶುಚಿಕಿತ್ಸಾ ಕೇಂದ್ರಗಳನ್ನು ಹಂತಹಂತವಾಗಿ ಮಂಜೂರು ಮಾಡಲು ಘೋಷಿಸಲಾಗಿದೆ. ರಾಜ್ಯದಲ್ಲಿ ಅವಶ್ಯಕತೆಗನುಗುಣವಾಗಿ ಮೊದಲ ಹಂತದಲ್ಲಿ 20 ಪಶು ಚಿಕಿತ್ಸಾಲಯಗಳನ್ನು ಮಂಜೂರು ಮಾಡಲಾಗಿದೆ.<br><br>ಆದರೆ, ದೇವನಹಳ್ಳಿ ಕ್ಷೇತ್ರಕ್ಕೆ ಯಾವುದೇ ಪಶುವೈದ್ಯಕೀಯ ಸಂಸ್ಥೆಯನ್ನು ಮಂಜೂರು ಮಾಡಿರುವುದಿಲ್ಲ. |
| ಇ) | ಆಯವ್ಯದಲ್ಲಿ ಘೋಷಿಸಿರುವಂತೆ ದೇವನಹಳ್ಳಿ ಕ್ಷೇತ್ರಕ್ಕೆ ಎಷ್ಟು ಪಶುಚಿಕಿತ್ಸಾ ಕೇಂದ್ರಗಳನ್ನು ಈಗಾಗಲೇ ಮಂಜೂರು ಮಾಡಿದೆ; (ಪೂರ್ಣ ವಿವರ ನೀಡುವುದು) | |
| ಈ) | ಮಂಜೂರು ಮಾಡದಿದ್ದಲ್ಲಿ ಅವಶ್ಯಕತೆ ಇರುವ ಸ್ಥಳಗಳಿಗೆ ಪಶುಚಿಕಿತ್ಸಾ ಕೇಂದ್ರಗಳನ್ನು ಕೂಡಲೇ ಮಂಜೂರು ಮಾಡಲು ಸರ್ಕಾರ ಕೈಗೊಂಡ ಕ್ರಮಗಳಾವುವು? (ಪೂರ್ಣ ವಿವರ ನೀಡುವುದು) | ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ 75,590 ಜಾನುವಾರು ಘಟಕಗಳಿದ್ದು, ಇವುಗಳ ಸೂಕ್ತ ಚಿಕಿತ್ಸೆಗಾಗಿ ಪ್ರಸ್ತುತ 26 ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ರಾಷ್ಟ್ರೀಯ ಕೃಷಿ ಆಯೋಗದ ಮಾರ್ಗಸೂಚಿಯಂತೆ 5000 |

| | | | |
|---|---|---|---|
| | | | ಜಾನುವಾರು ಘಟಕಗಳಿಗೆ ಕನಿಷ್ಟ 01 ಪಶುವೈದ್ಯಕೀಯ ಸಂಸ್ಥೆ ಇರಬೇಕಾಗಿರುತ್ತದೆ.<br><br>ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿರುವ ಜಾನುವಾರು ಘಟಕಗಳಿಗೆ ಅನುಗುಣವಾಗಿ 15 ಪಶುವೈದ್ಯಕೀಯ ಸಂಸ್ಥೆಗಳು ಇರಬೇಕಾಗಿದ್ದು, ಈಗಾಗಲೇ 26 ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿದ್ದು, ಅವಶ್ಯಕತೆಗನುಗುಣವಾಗಿ ಪಶುವೈದ್ಯಕೀಯ ಸಂಸ್ಥೆಗಳನ್ನು ಮಂಜೂರು ಮಾಡುವ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ: ಪಸಂಮೀ ಇ-133 ಪಸಸೇ 2022

(ಪ್ರಭು.ಬಿ.ಚವ್ಹಾಣ್)
ಪಶುಸಂಗೋಪನಾ ಸಚಿವರು



# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:-** 2022-23 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಹೊಸದಾಗಿ 100 ಪಶುಚಿಕಿತ್ಸಾಲಯಗಳನ್ನು ಹಂತ ಹಂತವಾಗಿ ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:-**
1. ಇ-ಆಫೀಸ್ ಕಡತ ಸಂಖ್ಯೆ: CAHVS-DEV0NSC/1/2022-DEVCAH-COMM AHVS
2. ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ/53/ವೆಚ್ಚ-4/2022, ದಿನಾಂಕ:05.04.2022
3. ಸರ್ಕಾರದ ಆದೇಶ ಸಂಖ್ಯೆ ಪಸಂಮೀ ಇ-77 ಪಸಸೇ 2022, ದಿನಾಂಕ:08.04.2022
4. ಆಪಸಂ/ಡಿವಿಡಿ-3/ನೂ.ಪ.ಚಿ.2022-23,ದಿನಾಂಕ: 18.04.2022
5. ಆಪಸಂ/ಸಿಬ್ಬಂದಿ-ಎ5/ಇ-74/2022, ದಿನಾಂಕ:13.05.2022

**ಪ್ರಸ್ತಾವನೆ:-**

2022-23 ನೇ ಸಾಲಿನ ಆಯವ್ಯಯದ ಕಂಡಿಕೆ-50 ರಲ್ಲಿ "ಗ್ರಾಮೀಣ ಪ್ರದೇಶದಲ್ಲಿ ಜಾನುವಾರುಗಳ ಆರೋಗ್ಯ ರಕ್ಷಣೆಯು ನಮ್ಮ ಸರ್ಕಾರದ ಪ್ರಮುಖ ಆದ್ಯತೆಯಾಗಿದ್ದು, ಈ ನಿಟ್ಟಿನಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಪಶುಚಿಕಿತ್ಸಾಲಯಗಳನ್ನು ಬಲಪಡಿಸುವುದರೊಂದಿಗೆ ನೂತನ 100 ಪಶುಚಿಕಿತ್ಸಾಲಯಗಳನ್ನು ಹಂತ ಹಂತವಾಗಿ ಪ್ರಾರಂಭಿಸಲಾಗುವುದು" ಎಂದು ಹೊಸದಾಗಿ ಯೋಜನೆಯನ್ನು ಘೋಷಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ (1) ರ ಇ-ಆಫೀಸ್ ಕಡತದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಅಪರ ನಿರ್ದೇಶಕರು (ಅಭಿವೃದ್ಧಿ), ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಆಯುಕ್ತಾಲಯ ಪಶುಪಾಲನಾ ಭವನ, ಹೆಬ್ಬಾಳ, ಬೆಂಗಳೂರು ಇವರು ನೀಡಿರುವ ವಿಸ್ತೃತ ಯೋಜನೆ ವರದಿಯೊಂದಿಗೆ ಪ್ರಸ್ತಾನವೆ ಸಲ್ಲಿಸಿದ್ದು, ಸದರಿ ವರದಿ/ಪ್ರಸ್ತಾವನೆಯನ್ವಯ ಪರಿಶೀಲಿಸಿ ಕ್ರ.ಸಂ (2) ರಲ್ಲಿ ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿಯಲ್ಲಿ ನೀಡಿರುವ ಸಹಮತಿ ಮೇರೆಗೆ ಕ್ರ.ಸಂ (3) ರ ಆದೇಶದಲ್ಲಿ ಪ್ರಾರಂಭಿಕ ಹಂತದಲ್ಲಿ 20 ಪಶುಚಿಕಿತ್ಸಾಲಯಗಳನ್ನು ಬಾಡಿಗೆ ಕಟ್ಟಡಗಳಲ್ಲಿ ಅಥವಾ ಇಲಾಖೆಯ ಸ್ವಂತ ಕಟ್ಟಡಗಳಲ್ಲಿ 6 ತಿಂಗಳ ಅವಧಿಗೆ ಪ್ರಾರಂಭಿಸುವುದು ಮತ್ತು ನಂತರದಲ್ಲಿ ಹೆಚ್ಚಿನ ಪಶುಚಿಕಿತ್ಸಾಲಯಗಳನ್ನು ತೆರೆಯುವ ಬಗ್ಗೆ ನಿರ್ಧರಿಸಲು ತಿಳಿಸಿ, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ, ಪ್ರಸ್ತಾಪಿತ 20 ಪಶುಚಿಕಿತ್ಸಾಲಯಗಳ ಸ್ಥಳಗಳನ್ನು ಗುರುತಿಸಿ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು ಎಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ (4) ರ ಸ್ವೀಕೃತಿಯಲ್ಲಿ, ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು 2022-23 ನೇ ಸಾಲಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ನೂತನ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವಂತೆ ಕೋರಿ ಈವರೆಗೆ ಸ್ವೀಕೃತವಾಗಿರುವ ಒಟ್ಟು 714 ಮನವಿ ಗಳನ್ನು ಪರಿಶೀಲಿಸಿ ಆಯ್ಕೆ ಮಾಡಲಾಗಿರುವ ಅರ್ಹ ಗ್ರಾಮಗಳ ಜಿಲ್ಲಾವಾರು ಬೇಡಿಕೆಗಳ ಕ್ರೋಢಿಕೃತ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | | | | | | | |
|---|---|---|---|---|---|---|---|
| 175 | AH25175 | Uttara kannada | Haliyala | Veterinary Hospital | Dandeli | 38.00 | NPCCL |
| 176 | AH25176 | Belagavi | Bailahongala | Veterinary Hospital | Bailahongala | 40.00 | NPCCL |
| 177 | AH25177 | Bagalakote | Hunagunda | Veterinary Hospital | Ilakal | 40.00 | NPCCL |
| 178 | AH25178 | Koppala | Gangavathi | Veterinary Hospital | Karatagi | 40.00 | NPCCL |
| 179 | AH25179 | Bagalkote | Bagalkote | Polyclinic | Bagalkote | 215.00 | NPCCL |
| 180 | AH25180 | Gadag | Gadag | Polyclinic | Gadag | 215.00 | NPCCL |
| 181 | AH25181 | Kolar | Kolar | Polyclinic | Kolar | 204.00 | NPCCL |
| | | | **TOTAL** | | | **7918.00** | |

(ಆರ್. ಲೀಲಾವತಿ)

ಸರ್ಕಾರದ ಅಪರ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 137 |
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : | 12.09.2022 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬೆಳವಡಿ- ಪಟ್ಟಿಹಾಳ ಕೆ.ಬಿ, ಚಚಡಿ- ಹೀರೆಬುದುನೂರ ರಸ್ತೆಗಳು ಅತಿವೃಷ್ಟಿಯಿಂದಾಗಿ ಸಂಪೂರ್ಣವಾಗಿ ಹಾಳಾಗಿದ್ದು ಇದರಿಂದಾಗಿ ಸಾರ್ವಜನಿಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಸದರಿ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಬೇಕಾಗುವ ಮೊತ್ತವೆಷ್ಟು; | **ಬೆಳವಡಿ–ಪಟ್ಟಿಹಾಳ ಕೆ.ಬಿ:**<br>ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬೆಳವಡಿ-ಪಟ್ಟಿಹಾಳ ಕೆ.ಬಿ ರಸ್ತೆಯು ಸಿಂಧನೂರು ಹೆಮ್ಮಡಗಾ ರಾಜ್ಯ ಹೆದ್ದಾರಿಯ ಭಾಗವಾಗಿದ್ದು, ಕಿಮೀ 211.60 ರಿಂದ 233.42 ರವರೆಗೆ ಒಟ್ಟು 19.38 ಕಿಮೀ ಉದ್ದ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಹಾದುಹೋಗುತ್ತದೆ. ಇದರಲ್ಲಿ ಬೆಳವಡಿಯಿಂದ ಪಟ್ಟಿಹಾಳ ಕೆ.ಬಿ ವರೆಗೆ 5.70 ಕಿಮೀ ಉದ್ದದ ರಸ್ತೆಯು ಮಳೆಯಿಂದಾಗಿ ಹಾಳಾಗಿರುತ್ತದೆ. ಕಾರಣ ಸದರಿ ರಸ್ತೆಯನ್ನು ಅಭಿವೃದ್ಧಿಪಡಿಸಲು ಒಟ್ಟು ರೂ.800.00 ಲಕ್ಷಗಳ ಅನುದಾನದ ಅವಶ್ಯಕತೆ ಇರುತ್ತದೆ.<br>**ಚಚಡಿ–ಹೀರೆಬುದುನೂರ:**<br>ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಚಚಡಿ–ಹೀರೆಬುದುನೂರ ರಸ್ತೆಯು ಕುಟರನಟ್ಟಿ–ಚಿಕ್ಕಬುದನೂರ–ಚಚಡಿ–ವಣ್ಣೂರದಿಂದ ತಾಲ್ಲೂಕು ಗಡಿಗೆ ಕೂಡುವ ಜಿಲ್ಲಾ ಮುಖ್ಯ ರಸ್ತೆಯಾಗಿದ್ದು, ಒಟ್ಟು ಕಿಮೀ 0.00 ರಿಂದ 15.00 ರವರೆಗೆ 15.00 ಕಿಮೀ ಉದ್ದವಿರುತ್ತದೆ. ಚಚಡಿಯಿಂದ ಹಿರೇಬುದುನೂರು ರಸ್ತೆಯ ಕಿಮೀ 4.00 ರಿಂದ 11.00 ರವರೆಗೆ ಒಟ್ಟು 7.00 ಕಿಮೀ ಉದ್ದ ಇರುತ್ತದೆ. ಸದರಿ ರಸ್ತೆಯ ಆಯ್ದ ಭಾಗಗಳಲ್ಲಿ ಮಳೆಯಿಂದ ಹಾಳಾಗಿರುತ್ತದೆ. ಹಾಳಾದ ರಸ್ತೆಯನ್ನು ಅಭಿವೃದ್ಧಿಪಡಿಸಲು ರೂ.700.00 ಲಕ್ಷಗಳ ಅನುದಾದ ಅವಶ್ಯಕತೆ ಇರುತ್ತದೆ |
| ಇ) | ಈ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಸರ್ಕಾರವು ಕೂಡಲೇ ಕ್ರಮಕೈಗೊಳ್ಳುವುದೇ? (ವಿವರ ನೀಡುವುದು) | ಸದರಿ ರಸ್ತೆಗಳ ಆಯ್ದ ಭಾಗಗಳಲ್ಲಿ ಬಿದ್ದಿರುವ ತಗ್ಗು ಗುಂಡಿಗಳನ್ನು ತಾತ್ಕಾಲಿಕವಾಗಿ ತುಂಬಿ ಸಾರ್ವಜನಿಕ ಸುಗಮ ವಾಹನ ಸಂಚಾರಕ್ಕಾಗಿ ಅನುವು ಮಾಡಿ ಕೊಡಲಾಗಿದೆ. |

ಲೋಇ 86 ಪಿಕ್ಯೂಎಸ್ 2022(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 138 |
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : | 12.09.2022 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹಿಟ್ಟಣಗಿಯಿಂದ ಹಳೆ ಅಸುಂಡಿ, ಬೈಲವಾಡ ಕ್ರಾಸ್ ನಿಂದ – ಬೈಲವಾಡ ವರೆಗೆ ಕಡಸಗಟ್ಟಿ– ಹೀರೆಬೆಳ್ಳಿಕಟ್ಟಿ, ದೊಡವಾಡ–ಬುಡರಕಟ್ಟಿ ಮತ್ತು ಅಮಟೂರ –ನಯಾನಗ ರಸ್ತೆಗಳು ಅತಿ ವೃಷ್ಟಿಯಿಂದ ಸಂಪೂರ್ಣವಾಗಿ ಹಾಳಾಗಿದ್ದು ಸಾರ್ವಜನಿಕ ಸಂಚಾರಕ್ಕೆ ತೊಂದರೆಯಾಗಿರುವುದು ನಿಜವಲ್ಲವೇ; | ಹೌದು |
| ಆ) | ಹಾಗಿದ್ದಲ್ಲಿ, ಸದರಿ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಬೇಕಾಗುವ ಮೊತ್ತವೆಷ್ಟು; | **ಹಿಟ್ಟಣಗಿಯಿಂದ ಹಳೆ ಅಸುಂಡಿ ರಸ್ತೆ:**<br>ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹಿಟ್ಟಣಗಿಯಿಂದ ಹಳೆ ಅಸುಂಡಿ ರಸ್ತೆಯು ಅಸುಂಡಿ–ಹಿಟ್ಟಣಗಿ–ಸುತಗಟ್ಟಿ ಇದು ಜಿಲ್ಲಾ ಮುಖ್ಯ ರಸ್ತೆಯಾಗಿದ್ದು, ಕಿಮೀ 0.00 ರಿಂದ 9.80 ರವರೆಗೆ ಒಟ್ಟು 9.80 ಕಿ.ಮೀ ಉದ್ದ ಇರುತ್ತದೆ. ಸದರಿ ರಸ್ತೆಯ ಕಿಮೀ 0.00 ರಿಂದ 0.50 ವರೆಗೆ ಅಸುಂಡಿ ಗ್ರಾಮ ಪರಿಮಿತಿಯಲ್ಲಿ ಸಿ.ಸಿ. ರಸ್ತೆ ನಿರ್ಮಾಣ ಮಾಡುವ ಕಾಮಗಾರಿಯು ರೂ.200.00 ಲಕ್ಷಗಳಿಗೆ 2022–23ನೇ ಸಾಲಿನ ಅಪೆಂಡಿಕ್ಸ್–ಇ ಲೆಕ್ಕ ಶೀರ್ಷಿಕೆ ಜಿಲ್ಲಾ ಮುಖ್ಯ ರಸ್ತೆ ಸುಧಾರಣೆ ಅಡಿಯಲ್ಲಿ ಮಂಜೂರಾಗಿರುತ್ತದೆ. ಕಿಮೀ 3.55 ರಿಂದ 4.50 ರ ವರೆಗೆ ಹಾಗೂ 5.76 ರಿಂದ 9.80 ರವರೆಗೆ ಒಟ್ಟು 4.99 ಕಿಮೀ ಉದ್ದದ ರಸ್ತೆಯನ್ನು 2021–2022ನೇ ಸಾಲಿನ ಲೆಕ್ಕ ಶೀರ್ಷಿಕೆ 3054 ಜಿ.ಮು.ರ. ನಿರ್ವಹಣೆ (ಅತಿವೃಷ್ಟಿಯಿಂದ ಹಾಳಾದ ರಸ್ತೆಗಳು) ಅಡಿಯಲ್ಲಿ ರೂ.500.00 ಲಕ್ಷಗಳಿಗೆ ಮಂಜೂರಾಗಿದ್ದು, ಕಾಮಗಾರಿ ಪ್ರಾರಂಭಿಸಬೇಕಾಗಿದೆ. ಕಿಮೀ 4.50 ರಿಂದ 5.76 ರವರೆಗೆ 2018–19ನೇ ಸಾಲಿನಲ್ಲಿ ಸಿ.ಎಮ್.ಜಿಆರ್.ವಾಯ್ ಅಡಿಯಲ್ಲಿ 0.95 ಕಿಮೀ ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿದೆ. ಇನ್ನುಳಿದ ರಸ್ತೆಯ ಭಾಗವಾದ ಕಿಮೀ 0.50 ರಿಂದ 3.55 ರವರೆಗೆ ಒಟ್ಟು 3.05 ಕಿಮೀ ರಸ್ತೆಯನ್ನು ಅಭಿವೃದ್ಧಿಪಡಿಸಲು ರೂ.300.00 ಲಕ್ಷಗಳ ಅನುದಾನದ ಅವಶ್ಯಕತೆ ಇರುತ್ತದೆ.<br><br>**ಬೈಲವಾಡ ಕ್ರಾಸ್ ದಿಂದ ಬೈಲವಾಡ ರಸ್ತೆ:**<br>ಸದರಿ ರಸ್ತೆಯು ಸಂಪಗಾವ–ಬೈಲಹೊಂಗಲ ವ್ಹಾಯಾ: ಚಿವಟಗುಂಡಿ–ಬೈಲವಾಡ, ಬೈಲವಾಡ ವರ್ತಿ ಇದು ಜಿಲ್ಲಾ ಮುಖ್ಯ ರಸ್ತೆಯಾಗಿದ್ದು ಕಿಮೀ 0.00 ರಿಂದ 14.69 ರವರೆಗೆ ಒಟ್ಟು 14.69 ಕಿಮೀ ಉದ್ದ ಇರುತ್ತದೆ. ಬೈಲವಾಡ ಕ್ರಾಸದಿಂದ ಬೈಲವಾಡ ರಸ್ತೆಯ ಭಾಗವು ಕಿಮೀ 13.39 ರಿಂದ 14.69 ರವರೆಗೆ ಇದ್ದು, ಒಟ್ಟು 1.30 ಕಿಮೀ ಉದ್ದವಿದ್ದು, ಸದರಿ ರಸ್ತೆಯು 2021–22ನೇ ಸಾಲಿನ ಕಪ್ಪು ಸ್ಥಳ ಸುಧಾರಣೆ ಮಾಡುವ ಕಾಮಗಾರಿಯಡಿ ರೂ.100.00 ಲಕ್ಷಗಳಿಗೆ ಮಂಜೂರಾಗಿದ್ದು, |

| | ಪ್ರಶ್ನೆಗಳು | ಉತ್ತರಗಳು |
|---|---|---|
| | | ಪಿ.ಆರ್.ಎ.ಎಮ್.ಸಿ. (PRAMC) ವತಿಯಿಂದ ಈ ಗಲೆ ಟೆಂಡರ ಪ್ರಕ್ರಿಯೆಯನ್ನು ಮುಗಿಸಿ ಗುತ್ತಿಗೆದಾರರನ್ನು ನೇಮಕ ಮಾಡಿದ್ದು, ಈ ಮಳೆಗಾಲದ ನಂತರ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು.<br><br>**ಕಡಸಗಟ್ಟಿ-ಹಿರೇಬೆಳ್ಳಿಕಟ್ಟಿ ರಸ್ತೆ:**<br>ಸದರಿ ರಸ್ತೆಯು ಖೋದಾನಪೂರ-ಖಾನಾಪೂರ ವ್ಹಾಯಾ: ಕಡಸಗಟ್ಟಿ ಜಿಲ್ಲಾ ಮುಖ್ಯ ರಸ್ತೆಯಾಗಿದ್ದು, ಕಿಮೀ 2.00 ರಿಂದ 7.86 ರವರೆಗೆ ಒಟ್ಟು 5.86 ಕಿಮೀ ಉದ್ದ ಇರುತ್ತದೆ. ಕಡಸಗಟ್ಟಿಯಿಂದ ಹಿರೇಬೆಳ್ಳೀಕಟ್ಟಿ ರಸ್ತೆಯ ಭಾಗವು ಕಿಮೀ 4.00 ರಿಂದ 7.86 ರವರೆಗೆ ಅಂದರೆ 3.86 ಕಿಮೀ ಉದ್ದ ಇರುತ್ತದೆ. ಸದರಿ ರಸ್ತೆಯ ಭಾಗವನ್ನು ಅಭಿವೃದ್ಧಿಪಡಿಸಲು ರೂ.375.00 ಲಕ್ಷಗಳ ಅನುದಾನ ಅವಶ್ಯಕತೆ ಇರುತ್ತದೆ.<br><br>**ದೊಡವಾಡ-ಬುಡರಕಟ್ಟಿ ರಸ್ತೆ:**<br>ಸದರಿ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯಿಂದ ರಾಜ್ಯ ಹೆದ್ದಾರಿಯಾಗಿ ಮೇಲ್ದರ್ಜೆಗೇರಿಸಲಾಗಿದ್ದು, ಎನ್‌ಎಚ್-4ಎ (ಕಮತಗ)ದಿಂದ ಎಸ್‌ಎಚ್-56 (ಅಲಗವಾಡಿ) ಗೆ ಕೂಡುವ ರಾಜ್ಯ ಹೆದ್ದಾರಿಯಾಗಿರುತ್ತದೆ. ದೊಡವಾಡ ದಿಂದ ಬುಡರಕಟ್ಟಿ ವರೆಗಿನ ರಸ್ತೆಯ ಭಾಗವು ಕಿಮೀ 85.20 ರಿಂದ 90.70 ರವರೆಗೆ ಇದ್ದು ಕಿಮೀ 88.55 ರಿಂದ 90.60 ರವರೆಗೆ ಹಾಗೂ ಕಿಮೀ 91.22 ರಿಂದ 92.00 ರ ವರೆಗೆ ಒಟ್ಟು 2.83 ಕಿಮೀ ಉದ್ದದ ರಸ್ತೆಯನ್ನು 2019-20ನೇ ಸಾಲಿನ ಅಪೆಂಡಿಕ್-ಇ ರಡಿಯಲ್ಲಿ ಅಭಿವೃದ್ಧಿಪಡಿಸಲಾಗಿದೆ ಹಾಗೂ ಇನ್ನುಳಿದ ಭಾಗವಾದ ಕಿಮೀ 85.20 ರಿಂದ 88.55 ರವರೆಗೆ ಒಟ್ಟು 3.35 ಕಿಮೀ ರಸ್ತೆಯನ್ನು ಅಭಿವೃದ್ಧಿಪಡಿಸಲು ರೂ.320.00 ಲಕ್ಷಗಳ ಅನುದಾನದ ಅವಶ್ಯಕತೆ ಇರುತ್ತದೆ.<br><br>**ಅಮಟೂರು-ನಯಾನಗರ ರಸ್ತೆ:**<br>ಸದರಿ ರಸ್ತೆಯು ಮುಂಗಸೂಳಿ ಲಕ್ಷ್ಮೇಶ್ವರ ರಾಜ್ಯ ಹೆದ್ದಾರಿ 73 ಆಗಿದೆ. ಬೈಲಹೊಂಗಲ ಮತಕ್ಷೇತ್ರದಲ್ಲಿ ಒಟ್ಟು 28.21 ಕಿ.ಮೀ. ಉದ್ದವಿರುತ್ತದೆ(ಕಿ.ಮೀ. 175.95 ರಿಂದ 204.16 ರವರೆಗೆ) ಅಮಟೂರು - ನಯಾನಗರ ರಸ್ತೆ ಭಾಗವು ಕಿ.ಮೀ 181.00 ರಿಂದ 185.15 ರ ವರೆಗೆ ಒಟ್ಟು 4.15 ಕಿ.ಮೀ. ಉದ್ದವಿದ್ದು, ಸದರಿ ರಸ್ತೆಯ ಭಾಗವನ್ನು ಅಭಿವೃದ್ಧಿ ಪಡಿಸಲು ರೂ.600.00 ಲಕ್ಷಗಳ ಅನುದಾನದ ಅವಶ್ಯಕತೆ ಇರುತ್ತದೆ. |
| ಇ) | ಸದರಿ ರಸ್ತೆಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಕೂಡಲೆ ಅಭಿವೃದ್ಧಿಗೊಳಿಸಲು ಸರ್ಕಾರದಿಂದ ಕ್ರಮ ಕೈಗೊಳ್ಳಲಾಗುವುದೇ? (ವಿವರ ನೀಡುವುದು) | ಅನುದಾನದ ಲಭ್ಯತೆಯನುಸಾರ ಸದರಿ ರಸ್ತೆಯನ್ನು ಅಭಿವೃದ್ಧಿಪಡಿಸಲು ಆದ್ಯತೆಯ ಮೇಲೆ ಕ್ರಮವಹಿಸಲಾಗುವುದು. |

ಲೋಇ 84 ಸಿಕ್ಯೂಎನ್ 2022(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **139** |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ಪುರಸಭೆ ವ್ಯಾಪ್ತಿಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯಿಂದ ಎಷ್ಟು ಪ್ರದೇಶಗಳನ್ನು ಕೊಳಚೆ ಪ್ರದೇಶಗಳೆಂದು ಘೋಷಿಸಲಾಗಿದೆ ; | ಬೆಳಗಾವಿ ಜಿಲ್ಲೆ ಬೈಲಹೊಂಗಲ ಪುರಸಭೆ ವ್ಯಾಪ್ತಿಯಲ್ಲಿ ಒಟ್ಟು 07 ಕೊಳಗೇರಿ ಪ್ರದೇಶಗಳನ್ನು ಘೋಷಿಸಲಾಗಿದೆ. ವಿವರ ಕೆಳಕಂಡಂತಿದೆ.<br><br>ಕ್ರ.ಸಂ — ಘೋಷಿತ ಕೊಳಚೆ ಪ್ರದೇಶದ ಹೆಸರು<br>1. ವಡ್ಡರಗಲ್ಲಿ<br>2. ಇಂದಿರಾನಗರ<br>3. ಗೊಲ್ಲರಕೇರಿ<br>4. ಗುಂಡ್ಲೂರಚಾಳ<br>5. ಡೋರಗಲ್ಲಿ<br>6. ಮಜಗಾರಗಲ್ಲಿ<br>7. ಬಸವೇಶ್ವರ ನಗರ ಆಶ್ರಯ ನಗರ ದೇವಲಾಪುರ ರಸ್ತೆ |
| ಆ) | ಸದರಿ ಕೊಳಚೆ ಪ್ರದೇಶಗಳಲ್ಲಿರುವ ರಸ್ತೆಗಳು ಅತಿವೃಷ್ಟಿಯಿಂದಾಗಿ ಸಂಪೂರ್ಣ ಹಾಳಾಗಿರುವುದರಿಂದ ಅಲ್ಲಿ ವಾಸಿಸುತ್ತಿರುವ ಜನರ ಸಂಚಾರಕ್ಕೆ ತೊಂದರೆಯಾಗುತ್ತಿರುವುದು ನಿಜವಲ್ಲವೇ ; | ಬೆಳಗಾವಿ ಜಿಲ್ಲೆಯ ಬೈಲಹೊಂಗಲ ಪಟ್ಟಣದ ಗುಂಡ್ಲೂರಚಾಳ, ಇಂದಿರಾನಗರ ಮತ್ತು ಬಸವೇಶ್ವರನಗರ (ಆಶ್ರಯ ಕಾಲೋನಿ) ಕೊಳಗೇರಿ ಪ್ರದೇಶಗಳಲ್ಲಿ ರಸ್ತೆಗಳು, ಹಾಳಾಗಿದ್ದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಹಾಗಾದರೆ, ಸದರಿ ಕೊಳಚೆ ಪ್ರದೇಶಗಳನ್ನು ಅಭಿವೃದ್ಧಿಗೊಳಿಸಲು ವಿಶೇಷ ಅನುದಾನ ಮಂಜೂರು ಮಾಡಿ ಅಭಿವೃದ್ಧಿಪಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ? (ವಿವರ ನೀಡುವುದು) | ಸದರಿ ಕೊಳಚೆ ಪ್ರದೇಶಗಳನ್ನು ಅಭಿವೃದ್ಧಿಗೊಳಿಸಲು ಸರ್ಕಾರವು ಕೊಳಗೇರಿ ಪ್ರದೇಶ ಸುಧಾರಣೆಯಡಿ ಆಯವ್ಯಯದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಸಿ.ಸಿ.ರಸ್ತೆ, ಆರ್.ಸಿ.ಸಿ ಚರಂಡಿ, ಬೀದಿ ದೀಪ ಸೌಲಭ್ಯ ಒದಗಿಸಲು 2022-23 ನೇ ಸಾಲಿನ ಕೊಳಚೆ ಸುಧಾರಣೆ ಕ್ರಿಯಾ ಯೋಜನೆಯಡಿ ರೂ.30.00 ಲಕ್ಷಗಳು ಮಂಜೂರಾಗಿದ್ದು, ಟೆಂಡರ್ ಮುಖೇನ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುವುದು. |

ಸಂಖ್ಯೆ :ವಇ 113 ಎಸ್‌ಬಿ ಎಂ 2022

**(ವಿ. ಸೋಮಣ್ಣ)**
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್ (ದೇವನಹಳ್ಳಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **14** |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೇವನಹಳ್ಳಿ ಮೀಸಲು ವಿಧಾನ ಸಭಾ ಕ್ಷೇತ್ರವು ಹೆಚ್ಚಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ಬಡಜನರಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ.<br>2018 ರ ವಸತಿ/ನಿವೇಶನ ರಹಿತರ ಸಮೀಕ್ಷೆ ಪ್ರಕಾರ 3232 ವಸತಿರಹಿತರು ಹಾಗೂ 5006 ನಿವೇಶನರಹಿತರು ಲಭ್ಯವಿರುವುದು ಕಂಡು ಬಂದಿರುತ್ತದೆ. ವಿವರ ಕೆಳಕಂಡಂತಿದೆ. |

| ವರ್ಗ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಸಾಮಾನ್ಯ | ಅಲ್ಪ ಸಂಖ್ಯಾತರು | ಒಟ್ಟು |
|---|---|---|---|---|---|
| ವಸತಿ ರಹಿತರು | 1080 | 415 | 1709 | 28 | 3232 |
| ನಿವೇಶನ ರಹಿತರು | 1870 | 816 | 2250 | 70 | 5006 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಬಂದಿದ್ದಲ್ಲಿ, ಕಳೆದ 03 ವರ್ಷಗಳಿಂದ ಯಾವುದೇ ಸಮುದಾಯಕ್ಕೆ ಒಂದು ಮನೆಯನ್ನು ನೀಡದಿರಲು ಕಾರಣಗಳೇನು ; | 2019-20 ನೇ ಸಾಲಿನಿಂದ 2021-22 ನೇ ಸಾಲಿನವರೆಗೆ ವಿವಿಧ ವಸತಿ ಯೋಜನೆಗಳಡಿ ದೇವನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಒಟ್ಟು 1491 ಮನೆಗಳನ್ನು ಮಂಜೂರು ಮಾಡಲಾಗಿದೆ. |

| ವರ್ಷ | ಮಂಜೂರಾದ ಮನೆಗಳು | ಫಲಾನುಭವಿಗಳ ಆಯ್ಕೆ |
|---|---|---|
| 2019-2020 | 131 | 65 |
| 2020-2021 | 30 | 20 |
| 2021-2022 | 1330 | 1084 |
| **ಒಟ್ಟು** | **1491** | **1169** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ವಸತಿ ರಹಿತರಿಗೆ ಮನೆ ಮಂಜೂರು ಮಾಡುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು ; (ವಿವರ ನೀಡುವುದು) | 2021-22 ನೇ ಸಾಲಿನಲ್ಲಿ ವಿವಿಧ ವಸತಿ ಯೋಜನೆಯಡಿ ರಾಜ್ಯದಲ್ಲಿ 5 ಲಕ್ಷ ಮನೆಗಳನ್ನು ಮಂಜೂರು ಮಾಡಲಾಗಿದ್ದು, ಈ ಪೈಕಿ ಈಗಾಗಲೇ ಬಸವ ವಸತಿ ಯೋಜನೆಯಡಿ 210688, ಡಾ.ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ(ಗ್ರಾ) 72357, ಡಾ.ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ(ನ) 8054, ವಾಜಪೇಯಿ ನಗರ ವಸತಿ ಯೋಜನೆ 24629 ಹಾಗೂ ದೇವರಾಜು ಅರಸು ವಸತಿ ಯೋಜನೆ 25000 ಮನೆಗಳ ಒಟ್ಟು 340728 ಮನೆಗಳನ್ನು ಮಂಜೂರು ಮಾಡಲಾಗಿರುತ್ತದೆ. ಬಾಕಿ ಉಳಿದ ಮನೆಗಳನ್ನು ಹಂಚಿಕೆ ಮಾಡಲು ಕ್ರಮವಹಿಸಲಾಗುತ್ತಿದೆ.<br>ಹಂಚಿಕೆ ಮಾಡಲಾದ ಮನೆಗಳ ಪೈಕಿ 167411 ಫಲಾನುಭವಿಗಳನ್ನು ಆಯ್ಕೆಗೊಳಿಸಿ ಕಾಮಾಗಾರಿ ಆದೇಶ ನೀಡಲಾಗಿದೆ. ಇನ್ನುಳಿದಂತೆ ಆಯ್ಕೆ ಪ್ರಕ್ರಿಯೆಯು ಪ್ರಗತಿಯಲ್ಲಿದ್ದು, ಪ್ರಸಕ್ತ ಸಾಲಿನಲ್ಲಿ ಪೂರ್ಣಗೊಳಿಸಲಾಗುವುದು. |
| ಈ) | ಹಾಗಿದ್ದಲ್ಲಿ, ವಸತಿ ರಹಿತರಿಗೆ ಮನೆಗಳನ್ನು ಮಂಜೂರು ಮಾಡುವ ಬಗ್ಗೆ ಸರ್ಕಾರವು ಕೈಗೊಳ್ಳಲಿರುವ ಕ್ರಮಗಳೇನು ; | |
| ಉ) | ಯಾವ ಕಾಲಮಿತಿಯಲ್ಲಿ ಮನೆಗಳನ್ನು ಮಂಜೂರು ಮಾಡಲಾಗುವುದು ? (ಪೂರ್ಣ ವಿವರ ನೀಡುವುದು) | |

| | | |
|---|---|---|
| | | ಸರ್ಕಾರವು ಪ್ರತಿ ವರ್ಷ ಆಯವ್ಯದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ವಸತಿರಹಿತರಿಗೆ ಮನೆಗಳನ್ನು ಮಂಜೂರು ಮಾಡಲಾಗುವುದು. |

ಸಂಖ್ಯೆ :ವಇ 342 ಹೆಚ್‌ಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

# KARNATAKA LEGISLATIVE ASSEMBLY

| | | |
|---|---|---|
| **Starred Question No..** | : | **140** |
| **Member Name** | : | **Sri Ajay DharmSingh (Jevargi)** |
| **Date of Answer** | : | **12.09.2022** |
| **To be answered** | : | **Hon'ble Minister for Animal Husbandry** |

| Sl. No. | Question | Answer |
|---|---|---|
| 1. | Is the Government aware of the dilapidated condition of the Veterinary Dispensary buildings of Ballundagi, Naribola, Gowhar, Birala(B) Jeratagi, which are in Jevargi Legislative Assembly constituency (complete details to be furnished) | Yes,<br><br>Detailed annexure is enclosed |
| 2. | If yes, has the proposal received by the Government from the Animal Husbandry Department of Kalburgi District for the construction of new Veterinary Dispensarie under RIDF. | Yes, received |
| 3. | If received in what time will the Veterinary Dispensary be sanctioned, fund be released and construction completed? (complete Detail to be funished) | Construction of new Veterinary Institutions buildings at Ballundagi, Gowhar, Birala(B) and Jeratagi has been proposed in RIDF tranche-28. Construction will be started immediately after the approval from the NABARD under RIDF tranche-28 and repair works of Naribola Veterinary Institution have been undertaken through Zilla Panchayat. |

**No: AHF E-179 AID 2022**

8/9

**(Prabhu. B Chavan)**

**Minister for Animal Husbandry**

## Annexure

### Details of Veterinary Institutions of Jevargi Legislative Assembly Constitution

| Sl No. | Veterinary Institution | Present status | Remarks |
|---|---|---|---|
| 1 | Belundagi | Complete Dilapidated | New Building required |
| 2 | Gowhara | Complete Dilapidated not fit for use | New Building required |
| 3 | Birala B | Roof completely damaged building is week | New Building required |
| 4 | Charatagi | Complete Dilapidated | New Building required |
| 5 | Naribola | Roof damaged | Needs repair |

Director

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 141 |
| ಸದಸ್ಯರ ಹೆಸರು | : | ಶ್ರೀ ಡಾ. ಅಜಯ್ ಧರ್ಮ್‌ಸಿಂಗ್ (ಜೇವರ್ಗಿ) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 12-09-2022 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯ ಯಡ್ರಾಮಿ ತಾಲ್ಲೂಕಿನ ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು ಸರ್ವೆ ನಂಬರ್-442 ರಲ್ಲಿ 5-00 ಎಕರೆ ಜಮೀನನ್ನು ಕಾಯ್ದಿರಿಸಿದ್ದು, ಜಿಲ್ಲಾಧಿಕಾರಿಗಳು ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆಯೇ; (ಸಂಪೂರ್ಣ ವಿವರ ನೀಡುವುದು) | ಕಲಬುರಗಿ ಜಿಲ್ಲೆಯಲ್ಲಿ ಹೊಸದಾಗಿ ರಚನೆಯಾದ ಯಡ್ರಾಮಿ ತಾಲ್ಲೂಕಿನ ತಾಲ್ಲೂಕು ಆಡಳಿತ ಸೌಧ ನಿರ್ಮಿಸುವ ಪ್ರಸ್ತಾವನೆಯು ಸ್ವೀಕೃತವಾಗಿರುವುದಿಲ್ಲ.<br><br>ಜಿಲ್ಲಾಧಿಕಾರಿಗಳು ಜಮೀನು ಕಾಯ್ದಿರಿಸಿದ ನಂತರ ದಿನಾಂಕ:12.05.2022 ರಂದು ಯಡ್ರಾಮಿ ತಾಲ್ಲೂಕಿನ ತಾಲ್ಲೂಕು ಆಡಳಿತ ಸೌಧ ನಿರ್ಮಾಣಕ್ಕಾಗಿ ನೀಲಿನಕ್ಷೆ ಮತ್ತು ಅಂದಾಜು ಪಟ್ಟಿಯ ಯೋಜನಾ ವರದಿಯನ್ನು ತಯಾರಿಸಲು ಕಾರ್ಯನಿರ್ವಾಹಕ ಅಭಿಯಂತರರು ಲೋಕೋಪಯೋಗಿ ಇಲಾಖೆ, ಕಲಬುರಗಿ ವಿಭಾಗ ಇವರಿಗೆ ಪತ್ರ ಬರೆದಿರುತ್ತಾರೆ.<br><br>ಜಿಲ್ಲಾಧಿಕಾರಿಗಳಿಂದ ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು ಪ್ರಸ್ತಾವನೆ ಸ್ವೀಕೃತವಾದ ನಂತರ ನಿಯಮಾನುಸಾರ ಪರಿಶೀಲಿಸಿ, ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಕ್ರಮವಹಿಸಲಾಗುವುದು. |
| ಆ) | ಇಲ್ಲದಿದ್ದಲ್ಲಿ, 2017ನೇ ಸಾಲಿನಿಂದ ಪ್ರಸ್ತಾವನೆ ಸಲ್ಲಿಸದಿರಲು ಕಾರಣಗಳೇನು; (ಸಂಪೂರ್ಣ ವಿವರ ನೀಡುವುದು) | |
| ಇ) | ಜಿಲ್ಲಾಧಿಕಾರಿಗಳು ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು ಪ್ರಸ್ತಾವನೆಯನ್ನು ಸಲ್ಲಿಸಿದ್ದಲ್ಲಿ ಯಾವ ಕಾಲಮಿತಿಯಲ್ಲಿ ಮಂಜೂರಾತಿ ನೀಡಲಾಗುವುದು; ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು ಅವಶ್ಯವಿರುವ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | |

**ಕಂಇ 87 ಡಬ್ಲ್ಯೂಬಿಆರ್ 2022**

(ಆರ್. ಅಶೋಕ)
ಕಂದಾಯ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 142 |
| ಸದಸ್ಯರ ಹೆಸರು | ಡಾ॥ ಅಜಯ್ ಧರ್ಮಸಿಂಗ್ |
| ಉತ್ತರಿಸುವ ದಿನಾಂಕ | 12-09-2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2020-21 ಮತ್ತು 2021-22ನೇ ಸಾಲಿನಲ್ಲಿ ಜೇವರ್ಗಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ದೇವಾಲಯಗಳ ಅಭಿವೃದ್ಧಿಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು; (ಗ್ರಾಮ ಪಂಚಾಯಿತಿವಾರು ಮಾಹಿತಿ ನೀಡುವುದು) | 2020-21ನೇ ಸಾಲಿಗೆ ರೂ.124.37ಲಕ್ಷಗಳು ಹಾಗೂ 2021-22ನೇ ಸಾಲಿನಲ್ಲಿ ರೂ.13.87ಲಕ್ಷಗಳು **ಒಟ್ಟು ರೂ.138.24ಲಕ್ಷಗಳು** ಅನುದಾನ ಬಿಡುಗಡೆ ಮಾಡಲಾಗಿದೆ.<br><br>ಯೋಜನೆಗಳ ವಿವರಗಳು ಈ ಕೆಳಕಂಡಂತಿದೆ.<br><br>(ಕೆಳಗಿನ ಕೋಷ್ಟಕ ನೋಡಿ)<br><br>ಗ್ರಾಮ ಪಂಚಾಯಿತಿವಾರು ಮಾಹಿತಿಯನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ. |
| ಆ) | ಈ ಭಾಗದ ದೇವಾಲಯಗಳ ಅಭಿವೃದ್ಧಿಗೆ ಮಂಜೂರಾದ ಅನುದಾನವನ್ನು ಯೋಜನೆವಾರು ಬಿಡುಗಡೆ ಮಾಡಲು ಜಿಲ್ಲಾಧಿಕಾರಿಗಳು ಕೈಗೊಂಡ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಮೇಲ್ಕಂಡಂತೆ ವಿವಿಧ ಯೋಜನೆಗಳಡಿ ದೇವಾಲಯಗಳ ಅಭಿವೃದ್ಧಿಗೆ ಮಂಜೂರಾದ ಅನುದಾನವನ್ನು ಯೋಜನೆವಾರು ಸರ್ಕಾರವು ಹೊರಡಿಸಿರುವ ಮಾನದಂಡ/ಮಾರ್ಗಸೂಚಿಗಳನ್ವಯ ಸಂಬಂಧಪಟ್ಟ ಧಾರ್ಮಿಕ ಸಂಸ್ಥೆಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತಿರುತ್ತದೆ. (ಆದೇಶದ ಪ್ರತಿಗಳನ್ನು ಲಗತ್ತಿಸಿದೆ) |
| ಇ) | ಹಾಗಿದ್ದಲ್ಲಿ, ದೇವಾಲಯಗಳ ಅಭಿವೃದ್ಧಿಗೆ ಬಿಡುಗಡೆ ಮಾಡಿದ ಅನುದಾನದಲ್ಲಿ ಖರ್ಚಾಗಿರುವ ಹಾಗೂ ಬಾಕಿ ಉಳಿದಿರುವ ಅನುದಾನವೆಷ್ಟು (ಗ್ರಾಮ ಪಂಚಾಯಿತಿವಾರು ಭೌತಿಕ ಪ್ರಗತಿಗಳ ವಿವರ ನೀಡುವುದು) | ದೇವಾಲಯಗಳ ಅಭಿವೃದ್ಧಿಗೆ ಬಿಡುಗಡೆಯಾಗಿರುವ ಒಟ್ಟು ರೂ.138.24ಲಕ್ಷಗಳ ಅನುದಾನದಲ್ಲಿ ರೂ.132.15ಲಕ್ಷಗಳನ್ನು ದೇವಾಲಯಗಳ ಕಾಮಗಾರಿಗಳಿಗೆ ಬಿಡುಗಡೆ ಮಾಡಲಾಗಿದ್ದು, ಉಳಿದ ರೂ.6.09ಲಕ್ಷಗಳ ಅನುದಾನವು ಜಿಲಾಧಿಕಾರಿಗಳ ಹಂತದಲ್ಲಿ ಬಿಡುಗಡೆಗೊಳಿಸಲು ಬಾಕಿ ಇರುತ್ತದೆ.<br><br>ಸದರಿ ಅನುದಾನದಲ್ಲಿ ಒಟ್ಟು 19 ಕಾಮಗಾರಿಗಳ ಪೈಕಿ 14 ಕಾಮಗಾರಿಗಳು ಪೂರ್ಣಗೊಂಡಿದೆ. ಉಳಿದ 05 ಕಾಮಗಾರಿಗಳು ಪ್ರಗತಿಯ ಹಂತದಲ್ಲಿದೆ.<br><br>(ವಿವರಗಳನ್ನು **ಅನುಬಂಧ- 1** ರಲ್ಲಿ ನೀಡಲಾಗಿದೆ.)<br><br>ಸಂಬಂಧಪಟ್ಟ ದೇವಾಲಯಗಳಿಂದ ಆಡಳಿತಾತ್ಮಕ ಅನುಮೋದನೆಗಾಗಿ ಪ್ರಸ್ತಾವನೆಗಳು ಸ್ವೀಕೃತವಾಗದ ಕಾರಣ, ಈ ದೇವಾಲಯಗಳ ಕಾಮಗಾರಿಗಳು ಪ್ರಾರಂಭವಾಗಿರುವುದಿಲ್ಲ.<br><br>(ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ.) |
| ಈ) | ಈ ಅನುದಾನದಲ್ಲಿ ದೇವಾಲಯಗಳ ಅಭಿವೃದ್ಧಿ ಪೂರ್ಣಗೊಂಡಿರುವ ಕಾಮಗಾರಿಗಳೆಷ್ಟು; ಹಾಗೂ ಪೂರ್ಣಗೊಳ್ಳದೇ ಇರುವ ಕಾಮಗಾರಿಗಳೆಷ್ಟು; ಪೂರ್ಣಗೊಳಿಸದೇ ಇರಲು ಕಾರಣಗಳೇನು? (ಗ್ರಾಮ ಪಂಚಾಯಿತಿವಾರು ಮಾಹಿತಿ ನೀಡುವುದು) | |

ರೂ.ಲಕ್ಷಗಳಲ್ಲಿ

| ಯೋಜನೆ | 2020-21 | 2021-22 | ಒಟ್ಟು |
|---|---|---|---|
| ದುರಸ್ಥಿ/ಜೀರ್ಣೋದ್ಧಾರ/ನಿರ್ಮಾಣ | 115.00 | 4.50 | 119.50 |
| ಆರಾಧನಾ ಯೋಜನೆ | 3.30 | 3.30 | 6.60 |
| ಪರಿಶಿಷ್ಟ ಜಾತಿ ಉಪಯೋಜನೆ | 5.28 | 5.28 | 10.56 |
| ಗಿರಿಜನ ಉಪ ಯೋಜನೆ | 0.79 | 0.79 | 1.58 |
| **ಒಟ್ಟು** | **124.37** | **13.87** | **138.24** |

ಸಂಖ್ಯೆ: ಕಂಇ 140 ಮುಸಪ್ರ 2022

**(ಶಶಿಕಲಾ. ಅ. ಜೊಲ್ಲೆ)**
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು

## ಅನುಬಂಧ-1

### ಸರ್ಕಾರದಿಂದ ಜೇವರ್ಗಿ ಮತಕ್ಷೇತ್ರಕ್ಕೆ ಬಿಡುಗಡೆಯಾದ ಅನುದಾನದ ವಿವರ

| ಕ್ರ ಸಂ | ವರ್ಷ<br>ದೇವಸ್ಥಾನದ ಹೆಸರು ಮತ್ತು ಗ್ರಾಮ | ಗ್ರಾಮ ಪಂಚಾಯತ ಹೆಸರು | ಬಿಡುಗಡೆಯಾದ ಅನುದಾನ | ಕಾಮಗಾರಿಯ ಭೌತಿಕ ಪ್ರಗತಿ |
|---|---|---|---|---|
| ಸಾಮಾನ್ಯ ಯೋಜನೆ 2020-21 | | | | |
| 01 | ಶ್ರೀ ವಿಶ್ವಾರಾಧ್ಯ ತಪೋವನ ಮಠ, ಶಕಾಪೂರ | ಕಲಹಂಗರಗಾ | 25,00,000 | ಕಾಮಗಾರಿ ಪೂರ್ಣಗೊಂಡಿದೆ |
| 02 | ಶ್ರೀ ಸಿದ್ಧಲಿಂಗೇಶ್ವರ ವಿರಕ್ತ ಮಠ, ಸೊನ್ನ | ಸೊನ್ನ | 20,00,000 | ಕಾಮಗಾರಿ ಪೂರ್ಣಗೊಂಡಿದೆ |
| 03 | ಶ್ರೀ ಶ್ರೀ ಶ್ರೀ ಜಗದ್ಗುರು ಮರುಳಶಂಕರ ದೇವರ ಗುರುಪೀಠ, ಚಿಗರಹಳ್ಳಿ. | ಚಿಗರಹಳ್ಳಿ | 20,00,000 | ಕಾಮಗಾರಿ ಪೂರ್ಣಗೊಂಡಿದೆ |
| 04 | ಶ್ರೀ ಶಿವಾನಂದ ಶಿವಯೋಗಿ ಗ್ರಾಮೀಣ ಜನಕಲ್ಯಾಣ ಸಂಸ್ಥೆ (ರಿ), ಶ್ರೀ ಸಿದ್ಧಲಿಂಗೇಶ್ವರ ವಿರಕ್ತಮಠ, ಸೊನ್ನ | ಸೊನ್ನ | 25,00,000 | ಕಾಮಗಾರಿ ಪೂರ್ಣಗೊಂಡಿದೆ |
| 05 | ಶ್ರೀ ಗ್ರಾಮ ದೇವತೆ ದೇವಸ್ಥಾನ, ಯಡ್ರಾಮಿ | ಯಡ್ರಾಮಿ | 25,00,000 | ಕಾಮಗಾರಿ ಪೂರ್ಣಗೊಂಡಿದೆ |

| ಆರಾಧನಾ ಯೋಜನೆ 2020-21 | | | | |
|---|---|---|---|---|
| 01 | ಶ್ರೀ ಬೀರಲಿಂಗೇಶ್ವರ ದೇವಸ್ಥಾನ ಗ್ರಾ॥ಮಾರಡಗಿ ತಾ॥ | ಮಾರಡಗಿ | 3,30,000 | ಕಾಮಗಾರಿ ಪೂರ್ಣಗೊಂಡಿದೆ |

| (SCP) ಪರಿಶಿಷ್ಟ ಜಾತಿ ಉಪಯೋಜನೆ 2020-21 | | | | |
|---|---|---|---|---|
| 01 | ಶ್ರೀ ಮರಗಮ್ಮ ದೇವಿ ದೇವಸ್ಥಾನ ಗ್ರಾ॥ಇಜೇರಿ, ತಾ॥ಜೇವರ್ಗಿ | ಇಜೇರಿ | 4,00,000 | ಕಾಮಗಾರಿ ಪೂರ್ಣಗೊಂಡಿದೆ |
| 02 | ಶ್ರೀ ಯಲ್ಲಮ್ಮ ದೇವಿ ದೇವಸ್ಥಾನ ಗ್ರಾ॥ಖಾದ್ಯಾಪೂರ ತಾ॥ಜೇವರ್ಗಿ | ಯಾಳವಾರ | 1,28,000 | ಕಾಮಗಾರಿ ಪೂರ್ಣಗೊಂಡಿದೆ |

| (TSP) ಗಿರಿಜನ ಉಪಯೋಜನೆ 2020-21 | | | | |
|---|---|---|---|---|
| 01 | ಶ್ರೀ ಮಾದರ ಅಂಗಳ ಮರೇಮ್ಮಾ ದೇವಸ್ಥಾನ, ಗ್ರಾ॥ಹರವಾಳ, ತಾ॥ಜೇವರ್ಗಿ. | ಹರವಾಳ | 79000 | ಕಾಮಗಾರಿ ಪೂರ್ಣಗೊಂಡಿದೆ |

| ಸಾಮಾನ್ಯ ಯೋಜನೆ 2021-22 | | | | |
|---|---|---|---|---|
| 01 | ಶ್ರೀ ಬೀರಲಿಂಗೇಶ್ವರ ದೇವಸ್ಥಾನ, ವರವಿ | ವರವಿ | 1,50,000 | ಕಾಮಗಾರಿ ಪೂರ್ಣಗೊಂಡಿದೆ |
| 02 | ಶ್ರೀ ಬೀರಲಿಂಗೇಶ್ವರ ದೇವಸ್ಥಾನ, ಕುಮ್ಮನ ಸಿರಸಗಿ | ಕುಮ್ಮನ ಸಿರಸಗಿ | 1,50,000 | ಕಾಮಗಾರಿ ಪೂರ್ಣಗೊಂಡಿದೆ |
| 03 | ಶ್ರೀ ಜಗದ್ಗುರು ರೇವಣಸಿದ್ದೇಶ್ವರ ಟ್ರಸ್ಟ್ (ರಿ), ಕುಮ್ಮನಸಿರಸಗಿ, ಯಡ್ರಾಮಿ ತಾ|| | ಯಡ್ರಾಮಿ | 1,50,000 | ಕಾಮಗಾರಿ ಪೂರ್ಣಗೊಂಡಿದೆ |

| ಆರಾಧನಾ ಯೋಜನೆ 2021-22 | | | | |
|---|---|---|---|---|
| 01 | ಶ್ರೀ ಬಸವೇಶ್ವರ ದೇವಸ್ಥಾನ, ಗ್ರಾಮ||ನರಿಬೋಳ ತಾ||ಜೇವರ್ಗಿ | ನರಿಬೋಳ | 1,50,000 | ಕಾಮಗಾರಿ ಪ್ರಗತಿಯಲ್ಲಿದೆ |
| 02 | ಶ್ರೀ ಸಿದ್ಧಬಸವೇಶ್ವರ ದೇವಸ್ಥಾನ, ಗ್ರಾಮ||ಮಂದರವಾಡ, ತಾ||ಜೇವರ್ಗಿ | ಕೋಳಕೂರ | 1,80,000 | ಕಾಮಗಾರಿ ಪ್ರಗತಿಯಲ್ಲಿದೆ |

| (SCP) ಪರಿಶಿಷ್ಟ ಜಾತಿ ಉಪಯೋಜನೆ 2021-22 | | | | |
|---|---|---|---|---|
| 01 | ಶ್ರೀ ಮರೆಮ್ಮ ದೇವಿ ದೇವಸ್ಥಾನ ಗ್ರಾಮ||ಹಂಗರಗಾ (ಕೆ) ತಾ||ಜೇವರ್ಗಿ | ಹಂಗರಗಾ (ಕೆ) | 150000 | ಕಾಮಗಾರಿ ಪೂರ್ಣಗೊಂಡಿದೆ |
| 02 | ಶ್ರೀ ಸಂಗಮೇಶ್ವರ ದೇವಸ್ಥಾನ ಗ್ರಾಮ||ಹಾಲಗಡ್ಲ ತಾ||ಜೇವರ್ಗಿ | ಕೆಲ್ಲೂರ | 100000 | ಕಾಮಗಾರಿ ಪ್ರಗತಿಯಲ್ಲಿದೆ |
| 03 | ಶ್ರೀ ದುರ್ಗಾದೇವಿ ದೇವಸ್ಥಾನ ಗ್ರಾಮ||ರ್ಯಾವನೂರ | ಕಲಹಂಗರಗಾ | 100000 | ಕಾಮಗಾರಿ ಪ್ರಗತಿಯಲ್ಲಿದೆ |
| 04 | ಶ್ರೀ ಮರೆಮ್ಮ ದೇವಸ್ಥಾನ ಗ್ರಾಮ||ವರವಿ, ತಾ||ಜೇವರ್ಗಿ | ವರವಿ | 178000 | ಕಾಮಗಾರಿ ಪೂರ್ಣಗೊಂಡಿದೆ |

| (TSP) ಗಿರಿಜನ ಉಪಯೋಜನೆ 2021-22 | | | | |
|---|---|---|---|---|
| 01 | ಶ್ರೀ ಯಲ್ಲಾಲಿಂಗೇಶ್ವರ ದೇವಸ್ಥಾನ ಗ್ರಾಮ||ಹಾಲಗಡ್ಲ ತಾ||ಜೇವರ್ಗಿ | ಹಂಗರಗಾ (ಕೆ) | 79000 | ಕಾಮಗಾರಿ ಪ್ರಗತಿಯಲ್ಲಿದೆ |

ಷರಾ:- 19 ಕಾಮಗಾರಿಗಳಲ್ಲಿ 14 ಕಾಮಗರಿಗಳು ಪೂರ್ಣಗೊಂಡಿರುತ್ತವೆ. ಮತ್ತು 05 ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.

ಜಿಲ್ಲಾದಿಕಾರಿಗಳ ಪರವಾಗಿ
ಕಲಬುರಗಿ



ಕರ್ನಾಟಕ ಸರ್ಕಾರ

ಸಂಖ್ಯೆ ಕಂಇ 95 ಮುಆಬಿ 2010

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 20.09.2010

## ಸುತ್ತೋಲೆ

**ವಿಷಯ:** ರಾಜ್ಯದಲ್ಲಿನ ಧಾರ್ಮಿಕ ಸಂಸ್ಥೆಗಳು, ಪೂಜಾ ಸ್ಥಳಗಳ ದುರಸ್ತಿ, ಜೀರ್ಣೋದ್ಧಾರ ಹಾಗೂ ನವನಿರ್ಮಾಣ ಉದ್ದೇಶಕ್ಕಾಗಿ ಸರ್ಕಾರದಿಂದ ಮಂಜೂರಾದ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಸುತ್ತೋಲೆ ಸಂಖ್ಯೆ:ಆರ್‌ಡಿ 171 ಎಂಎಲ್‌ಡಿ 90, ದಿನಾಂಕ:7.9.1990
2. ಸಂಖ್ಯೆ: ಆರ್‌ಡಿ 171 ಎಂಎಲ್‌ಡಿ 90, ದಿನಾಂಕ:4.4.1991.
3. ಸಂಖ್ಯೆ: ಆರ್‌ಡಿ 171 ಎಂಎಲ್‌ಡಿ 2000, ದಿನಾಂಕ:28.1.2001
4. ಸಂಖ್ಯೆ: ಕಂಇ 59 ಮುಆಬಿ 2001, ದಿನಾಂಕ:4.9.2001.

---

ರಾಜ್ಯದಲ್ಲಿನ ಧಾರ್ಮಿಕ ಸಂಸ್ಥೆಗಳು, ಪೂಜಾ ಸ್ಥಳಗಳ ದುರಸ್ತಿ, ಜೀರ್ಣೋದ್ಧಾರ ಹಾಗೂ ನವನಿರ್ಮಾಣ ಕಾಮಗಾರಿಗಳಿಗಾಗಿ ಸರ್ಕಾರದಿಂದ ಅನುದಾನ ಮಂಜೂರು ಮಾಡಲಾಗುತ್ತಿದೆ. ಈ ಅನುದಾನವನ್ನು ಮಂಜೂರು ಬಿಡುಗಡೆ ಮಾಡುವ ಬಗ್ಗೆ ಉಲ್ಲೇಖದಲ್ಲಿ ತಿಳಿಸಿರುವ ಸುತ್ತೋಲೆಗಳಲ್ಲಿ ಸ್ಪಷ್ಟೀಕರಣ ಹೊರಡಿಸಲಾಗಿದೆ. ಕಳೆದ ಎರಡು ವರ್ಷಗಳಿಂದ, ಸರ್ಕಾರವು ಧಾರ್ಮಿಕ ಸಂಸ್ಥೆಗಳು, ಪೂಜಾ ಸ್ಥಳಗಳ ದುರಸ್ತಿ, ಜೀರ್ಣೋದ್ಧಾರ ಹಾಗೂ ನವನಿರ್ಮಾಣ ಕಾಮಗಾರಿಗಳಿಗಾಗಿ ಬಿಡುಗಡೆ ಮಾಡುವ ಅನುದಾನದ ಮೊತ್ತವನ್ನು ಗಣನೀಯವಾಗಿ ಹೆಚ್ಚಿಸಲಾಗಿದೆ. ಅನುದಾನ ಮಂಜೂರು ಮಾಡಲು ಸರ್ಕಾರದ ನಿಯಂತ್ರಣದಲ್ಲಿರುವ ಧಾರ್ಮಿಕ ಸಂಸ್ಥೆಗಳು, ಖಾಸಗಿ ಧಾರ್ಮಿಕ ಸಂಸ್ಥೆಗಳು ಹಾಗೂ ಮಠಗಳಿಂದ ಹೆಚ್ಚಿನ ಬೇಡಿಕೆಗಳು ಬರುತ್ತಿರುವುದರ ಹಿನ್ನೆಲೆಯಲ್ಲಿ, ಸರ್ಕಾರವು ಆಯವ್ಯಯ ಮುಂಗಡ ಪತ್ರದಲ್ಲಿ "2250-00-1-03-(101)- ದೇವಸ್ಥಾನಗಳು ಹಾಗೂ ಇತರ ಧಾರ್ಮಿಕ ಸಂಸ್ಥೆಗಳು ಸಹಾಯಾನುದಾನ" ಮತ್ತು "2250-00-800-1-03 (200)-ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳು ನಿರ್ವಹಣೆ" ಎಂಬ ಎರಡು ಲೆಕ್ಕ ಶೀರ್ಷಿಕೆಗಳಲ್ಲಿ ಹಣವನ್ನು ಈ ಉದ್ದೇಶಕ್ಕಾಗಿ ಒದಗಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಹಿಂದೆ ಹೊರಡಿಸಿದ ಉಲ್ಲೇಖದಲ್ಲಿ ಸೂಚಿಸಿರುವ ಎಲ್ಲಾ ಸುತ್ತೋಲೆಗಳನ್ನು ರದ್ದುಪಡಿಸಿ ಈ ಕೆಳಕಂಡ ಮಾರ್ಗಸೂಚಿಗಳನ್ನು [illegible]

[illegible]

ಮುಂಗಡ ಪತ್ರದ ಲೆಕ್ಕ ಶೀರ್ಷಿಕೆ "2250-00-800-1-03 (200)-ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳು -ನಿರ್ವಹಣೆ" ರಡಿಯಲ್ಲಿ ಒದಗಿಸಿದ ಮೊತ್ತವನ್ನು ಧಾರ್ಮಿಕ ದತ್ತಿ ಇಲಾಖಾ ನಿಯಂತ್ರಣಕ್ಕೆ ಒಳಪಡುವ ದೇವಸ್ಥಾನಗಳಿಗೆ ಮಂಜೂರು ಮಾಡಲಾಗುವುದು.

1. ಧಾರ್ಮಿಕ ದತ್ತಿ ಇಲಾಖಾ ನಿಯಂತ್ರಣದಲ್ಲಿರುವ ದೇವಸ್ಥಾನಗಳಿಗೆ ಅನುದಾನವನ್ನು ಮಂಜೂರು ಮಾಡುವ ಬಗ್ಗೆ ಹಂತ ಹಂತವಾಗಿ ಕೈಗೆತ್ತಿಕೊಳ್ಳುವುದು. ಇದಕ್ಕಾಗಿ ಜಿಲ್ಲಾಧಿಕಾರಿಗಳು ಸಂಸ್ಥೆಗಳಲ್ಲಿರುವ ಹಣದ ಪರಿಸ್ಥಿತಿಯನ್ನು ಅರಿತು ಪ್ರಸ್ತಾವನೆಗಳನ್ನು ಪಡೆದು, ತಮ್ಮ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ, ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವುದು. ತಮ್ಮ ವ್ಯಾಪ್ತಿಗೆ ಮೀರಿದರೆ, ಅವುಗಳನ್ನು ಧಾರ್ಮಿಕ ದತ್ತಿ ಆಯುಕ್ತರಿಗೆ ಕಳುಹಿಸುವುದು ಮತ್ತು ಧಾರ್ಮಿಕ ದತ್ತಿ ಆಯುಕ್ತರು ತಮ್ಮ ಅಧಿಕಾರವನ್ನು ಚಲಾಯಿಸಿ, ಅಂತಹ ಪ್ರಸ್ತಾವನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವುದು. ಧಾರ್ಮಿಕ ದತ್ತಿ ಆಯುಕ್ತರು ತಮ್ಮ ಅಧಿಕಾರ ವ್ಯಾಪ್ತಿಗೆ ಮೀರಿದರೆ ಅದನ್ನು ಸರ್ಕಾರಕ್ಕೆ ಸಲ್ಲಿಸುವುದು.

2. ದೇವಸ್ಥಾನದ ವ್ಯವಸ್ಥಾಪನಾ/ ಜೀರ್ಣೋದ್ಧಾರ ಸಮಿತಿಯವರು ಸಾರ್ವಜನಿಕರಿಂದ ಈ ಕೆಲಸಕ್ಕಾಗಿ ವಂತಿಗೆಯನ್ನು ಪಡೆದು ಸಂಗ್ರಹಿಸಿದರೆ ಅಂತಹ ಸಂಸ್ಥೆಗೆ ಸರ್ಕಾರದಿಂದ ಅನುದಾನವನ್ನು ಬಿಡುಗಡೆ ಮಾಡಲು ಆದ್ಯತೆ ನೀಡಲಾಗುವುದು. ಸರ್ಕಾರದಿಂದ ಪಡೆದ ಅನುದಾನ ಅಥವಾ ಸಾರ್ವಜನಿಕರಿಂದ ಸಂಗ್ರಹಿಸಿದ ವಂತಿಗೆ ಇವುಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿಡುವುದು ಮತ್ತು ಅವುಗಳ ಲೆಕ್ಕವನ್ನು ಸರಿಯಾಗಿ ನೋಡಿಕೊಳ್ಳುವುದು.

3. ಧಾರ್ಮಿಕ ಸಂಸ್ಥೆಗಳ / ದೇವಸ್ಥಾನಗಳ ದುರಸ್ತಿ, ಜೀರ್ಣೋದ್ಧಾರ, [illegible]

ಅನುದಾನವನ್ನು ಬಿಡುಗಡೆ ಮಾಡಲಾಗುವುದು. ದೇವಸ್ಥಾನ/ಧಾರ್ಮಿಕ ಸಂಸ್ಥೆಗೆ ಈ ಕೆಳಕಂಡ ಉದ್ದೇಶಗಳಿಗೆ ಆದ್ಯತೆ ನೀಡಲಾಗುವುದು:

1. ಗರ್ಭಗುಡಿಯ ದುರಸ್ತಿ,
2. ಪೂಜಾ ಸ್ಥಾನಗಳ ದುರಸ್ತಿ ಹಾಗೂ ನವೀಕರಣ,
3. ದೇವಸ್ಥಾನದ ಮಹಾ ದ್ವಾರದ ದುರಸ್ಥಿ,
4. ಭಕ್ತಾದಿಗಳು ದೇವರ ದರ್ಶನಕ್ಕಾಗಿ ಕಾಯುವ ಪ್ರಧಾನ ಮಂದಿರಗಳ ದುರಸ್ಥಿ,
5. ಪ್ರಾಕಾರಗಳ ದುರಸ್ಥಿ,
6. ಪಿಲ್ಲರುಗಳ ದುರಸ್ಥಿ,
7. ಧ್ವಜಸ್ಥಂಭಗಳ ದುರಸ್ಥಿ / ನಿರ್ಮಾಣ,
8. ಕಾಂಪೌಂಡ್ ಗೋಡೆಗಳ ದುರಸ್ಥಿ / ನಿರ್ಮಾಣ,
9. ಭಕ್ತಾದಿಗಳಿಗೆ ನಾಗರೀಕ ಸೇವಾ ಸೌಲಭ್ಯ ಒದಗಿಸುವುದು,
10. ದೇವಸ್ಥಾನದ ಅಕ್ಕಪಕ್ಕದಲ್ಲಿ ಕಲ್ಯಾಣ ಮಂಟಪ ನಿರ್ಮಾಣ.
11. ರಥ, ರಥದ ಮನೆ ದುರಸ್ಥಿ / ನಿರ್ಮಾಣ
12. ಶಿಲ್ಪ, ಶಿಲ್ಪಗಳ ಭಾಗಗಳ ದುರಸ್ಥಿ.

ಮೇಲೆ ಸೂಚಿಸಿದ ಕಾಮಗಾರಿಗಳನ್ನು, ಅವುಗಳು ಸೂಚಿಸಿರುವ ಕ್ರಮ ಸಂಖ್ಯೆ ಪ್ರಕಾರ ಆದ್ಯತೆ ಮೇಲೆ ಕೈಗೆತ್ತಿಕೊಳ್ಳಲು, ಇದಕ್ಕಾಗಿ ಜಿಲ್ಲಾಧಿಕಾರಿಗಳು ಪ್ರಸ್ತಾವನೆಗಳಿಗೆ ಧಾರ್ಮಿಕ ದತ್ತಿ ಆಯುಕ್ತರಿಗೆ ಅನುದಾನ ಬಿಡುಗಡೆ ಮಾಡಲು ಶಿಫಾರಸ್ಸು ಮಾಡುವುದು. ಮೇಲೆ ತಿಳಿಸಿದ ಯಾವುದೇ ಅರ್ಹ ವಿಷಯಗಳಲ್ಲಿ ಈ ಷರತ್ತುಗಳನ್ನು ಸರ್ಕಾರವು ಸಡಿಲಿಸಬಹುದಾಗಿದೆ. ಸರ್ಕಾರದಿಂದ ಪೂಜಾ ಸ್ಥಳಗಳ ದುರಸ್ಥಿ ಹಾಗೂ ನವೀಕರಣಕ್ಕಾಗಿ ಬಿಡುಗಡೆಯಾದಾಗ ಸರ್ಕಾರದ ಅನುದಾನವನ್ನು ಆಯಾ ದೇವಸ್ಥಾನಗಳಿಗೆ ಬಿಡುಗಡೆ ಮಾಡುವ ಬಗ್ಗೆ ಈ ಕೆಳಕಂಡ ನಿಯಮಗಳನ್ನು ಪಾಲಿಸುವುದು.

1. ಅನುದಾನವನ್ನು ಮಂಜೂರು ಮಾಡಿಸಿಕೊಂಡಂತಹ ದೇವಸ್ಥಾನಗಳು ಉದ್ದೇಶಿತ ಕಾಮಗಾರಿಗೆ ಸಂಬಂಧಿಸಿದಂತೆ ನಕ್ಷೆ ಮತ್ತು ಅಂದಾಜು ಪಟ್ಟಿಗೆ ತಾಂತ್ರಿಕ / ಆಡಳಿತಾತ್ಮಕ ಅನುಮೋದನೆಯನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದ ನಂತರ, ಮಂಜೂರಾದ ಮೊತ್ತವು ರೂ. 5.00 ಲಕ್ಷಕ್ಕಿಂತ ಕಡಿಮೆಯಾಗಿದ್ದಲ್ಲಿ, ಏಕ ಕಂತಿನಲ್ಲಿ ಕ್ರಾಸ್ ಚೆಕ್ ಮುಖಾಂತರವೇ ಸಂಸ್ಥೆಯ ಹೆಸರಿನಲ್ಲಿ ಪಾವತಿಸತಕ್ಕದ್ದು. ಹಾಗೂ

ಅನುದಾನ ಬಳಸಿದ ಬಗ್ಗೆ ಒಂದು ವರ್ಷದೊಳಗೆ ಬಳಕೆ ಪ್ರಮಾಣ ಪತ್ರ ಪಡೆಯುವುದು.

2. ಮಂಜೂರಾದ ಅನುದಾನವು ರೂ. 10.00 ಲಕ್ಷಕ್ಕೂ ಮೇಲ್ಪಟ್ಟಿದ್ದರೆ ಅನುದಾನವನ್ನು ಎರಡು ಸಮಾನ ಕಂತುಗಳಲ್ಲಿ ಸಂಸ್ಥೆಯ ಹೆಸರಿನಲ್ಲಿ ಬಿಡುಗಡೆ ಮಾಡುವುದು. ಮೊದಲನೇ ಕಂತನ್ನು ಪಡೆದ ಸಂಸ್ಥೆಯು ಉದ್ದೇಶಿತ ಕಾಮಗಾರಿಯನ್ನು ಕೈಗೆತ್ತಿಕೊಂಡು, ಈ ಅನುದಾನವನ್ನು ಖರ್ಚು ಮಾಡಿದ ನಂತರ, ಸದರಿ ಕಾಮಗಾರಿಯ ಪ್ರಗತಿ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ (ಲೋಕೋಪಯೋಗಿ ಇಲಾಖೆಯ ಅಥವಾ ಜಿಲ್ಲಾ ಪಂಚಾಯತ್ ಅಭಿಯಂತರರಿಂದ) ಪರಿವೀಕ್ಷಣೆ ಮಾಡಿಸಿ, ಅವರ ಅನುಮೋದನೆಯೊಂದಿಗೆ ಮೊದಲನೆ ಕಂತಿನ ಬಳಕೆ ಪ್ರಮಾಣ ಪತ್ರವನ್ನು ಸಂಬಂಧಿತ ಪ್ರಾಧಿಕಾರಕ್ಕೆ ಸಲ್ಲಿಸಿದ ನಂತರ, ಎರಡನೇ ಕಂತನ್ನು ಬಿಡುಗಡೆ ಮಾಡುವುದು.

3. ಸರ್ಕಾರದಿಂದ ಮಂಜೂರಾದ ಅನುದಾನದ ಜೊತೆಗೆ, ಧಾರ್ಮಿಕ ಸಂಸ್ಥೆಗಳು / ದೇವಸ್ಥಾನಗಳು ಇನ್ನುಳಿದ ವೆಚ್ಚವನ್ನು ಆಯಾ ಸಂಸ್ಥೆಗಳು, ಸಾರ್ವಜನಿಕರಿಂದ ಸಂಗ್ರಹಿಸಿದ ದೇಣಿಗೆಯಿಂದ ಖರ್ಚು ಮಾಡಿ, ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರೈಸುವುದು. ಮೊದಲನೇ ಕಂತು ಬಿಡುಗಡೆ ಮಾಡಲು ಸಂಘ/ ಸಂಸ್ಥೆಗಳಿಂದ ಕೋರಿಕೆ ಬಂದಾಗ, ಸಕ್ಷಮ ಪ್ರಾಧಿಕಾರದಿಂದ ಅಂದಾಜಿನ ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ಪಡೆಯಬೇಕೆಂಬುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು. ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ ಮಂಜೂರಾತಿ ಪಡೆದಿರುವುದನ್ನು ಖಚಿತ ಪಡಿಸಿಕೊಂಡು ಅನುದಾನ ಬಿಡುಗಡೆ ಮಾಡುವ ಪ್ರಾಧಿಕಾರವು ಮುಂದೆ ವಿಳಂಬ ಮಾಡದೆ ಅನುದಾನವನ್ನು ಆಯಾ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

4. ಸಾರ್ವಜನಿಕ ವಂತಿಗೆ ಹಾಗೂ ಸರ್ಕಾರದ ಅನುದಾನ ಉದ್ದೇಶಿತ ಕಾಮಗಾರಿಗಳಿಗೆ ಬಳಸಿರುವ ಬಗ್ಗೆ ಸರಿಯಾಗಿ ಲೆಕ್ಕ ಪತ್ರಗಳನ್ನು ನಿರ್ವಹಿಸತಕ್ಕದ್ದು, ಲೆಕ್ಕ ಪರಿಶೋಧನೆ ಮಾಡಿಸಿ ಸಾರ್ವಜನಿಕ ಹಣ ಅಪವ್ಯಯವಾಗದಂತೆ ಸಂಬಂಧಪಟ್ಟ ಸಂಸ್ಥೆಗಳು ನಿಗಾ ವಹಿಸುವುದು.

5. ಸರ್ಕಾರದಿಂದ ಬಿಡುಗಡೆಯಾದ ಅನುದಾನದ ಎರಡನೇ ಕಂತು ಬಿಡುಗಡೆ [illegible]

ಬಗ್ಗೆ ಬಳಕೆ ಪ್ರಮಾಣ ಪತ್ರ (Utilisation Certificate) ಸಲ್ಲಿಸುವುದು ಮತ್ತು ಎರಡನೇ ಕಂತಿನ ಅನುದಾನವನ್ನು ಉಪಯೋಗಿಸಿದ ನಂತರ ಎರಡನೇ ಕಂತಿನಲ್ಲಿ ಬಿಡುಗಡೆಯಾದ ಅನುದಾನಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

6. ಸರ್ಕಾರದಿಂದ ಅನುದಾನ ಮಂಜೂರಾಗುವ ಯಾವುದೇ ರೂ.5.00 ಲಕ್ಷಕ್ಕೂ ಮೇಲ್ಪಟ್ಟ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರ ನಿಯಮಗಳನ್ನು ಪಾಲಿಸುವುದು.

7. ಸಾರ್ವಜನಿಕ ಸ್ಥಳಗಳಾದ ಸಿ.ಎ. ನಿವೇಶನ, ಸರ್ವೀಸ್ ರಸ್ತೆಗಳು, ರಸ್ತೆಗಳು, ಪಾರ್ಕುಗಳು ಮತ್ತು ಇತರೆ ಸಾರ್ವಜನಿಕರು ಉಪಯೋಗ ಪಡಿಸುವಂತ ಸ್ಥಳಗಳಲ್ಲಿ ದೇವಸ್ಥಾನಗಳು ಇದ್ದಲ್ಲಿ ಅಂತಹವುಗಳಿಗೆ ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆ ಮಾಡಲಾಗುವುದಿಲ್ಲ. ಇದನ್ನು ಅನುದಾನ ಬಿಡುಗಡೆ ಮಾಡುವ ಸಕ್ಷಮ ಪ್ರಾಧಿಕಾರಗಳು ಖಚಿತ ಪಡಿಸಿಕೊಳ್ಳುವುದು.

8. ಸರ್ಕಾರದಿಂದ ಬಿಡುಗಡೆಯಾದ ಅನುದಾನದ ಮೊದಲನೇ ಕಂತು ಬಿಡುಗಡೆಯಾದ ದಿನಾಂಕದಿಂದ ಒಂದು ವರ್ಷದೊಳಗಾಗಿ ಪೂರ್ಣ ಹಣವನ್ನು ಬಿಡುಗಡೆ ಮಾಡಿಸಿಕೊಳ್ಳಲು ಸಂಬಂಧಿಸಿದ ದೇವಸ್ಥಾನದ ಸಮಿತಿ ಕ್ರಮ ಜರುಗಿಸುವುದು. ಒಂದು ವರ್ಷದೊಳಗಾಗಿ ಬಿಡುಗಡೆ ಮಾಡಿಸಿಕೊಳ್ಳಲು ಕ್ರಮ ವಹಿಸದಿದ್ದರೆ ಬೇರೆ ದೇವಸ್ಥಾನಗಳಿಗೆ ಮರು ಹಂಚಿಕೆ ಮಾಡಲು ಸರ್ಕಾರ ಕ್ರಮ ಜರುಗಿಸುವುದು.

9. ಪ್ರಸ್ತುತ ಮಂಜೂರಾಗಿ ಬಿಡುಗಡೆ ಆಗದೆ ಇರುವ ಅನುದಾನವನ್ನು ಬಿಡುಗಡೆ ಮಾಡಲು, ಈ ಮಾರ್ಗಸೂಚಿಗಳನ್ನೇ ಅನುಸರಿಸುವುದು:

ಆಡಳಿತಾತ್ಮಕ ಮಂಜೂರು ಮಾಡುವ ಅಧಿಕಾರವನ್ನು ಪ್ರತ್ಯಾಯೋಜಿಸಿರುವ ಸಕ್ಷಮ ಪ್ರಾಧಿಕಾರಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಕಂಇ 08 ಮುಸೇವಿ 2009 ದಿನಾಂಕ:27.01.2009 ರಲ್ಲಿ ಗುರುತಿಸಲಾಗಿದೆ. ಈ ಅಧಿಕಾರ ಪ್ರತ್ಯಾಯೋಜನೆಯಂತೆ ಸರ್ಕಾರದಿಂದ ಅನುದಾನ ಮಂಜೂರಾದ ದೇವಸ್ಥಾನಗಳು, ಲೋಕೋಪಯೋಗಿ ಇಲಾಖೆಯಿಂದ ಲೈಸೆನ್ಸ್ ಪಡೆದುಕೊಂಡಂತಹ ವ್ಯಕ್ತಿಗಳು/ ಸಂಸ್ಥೆಗಳಿಂದ ಧಾರ್ಮಿಕ ಸಂಸ್ಥೆಗಳು/ ದೇವಸ್ಥಾನಗಳ [illegible] / ದುರಸ್ತಿ ಮತ್ತು ನವೀಕರಣಕ್ಕಾಗಿ [illegible] ತಯಾರಿಸಿ ಸಕ್ಷಮ [illegible]

## II. ಖಾಸಗಿ ದೇವಸ್ಥಾನಗಳಿಗೆ/ ಸಂಸ್ಥೆಗಳಿಗೆ ಸಂಬಂಧಿಸಿದಂತೆ

ಮುಂಗಡ ಪತ್ರದ ಲೆಕ್ಕ ಶೀರ್ಷಿಕೆ "2250-00-1-03 (101)-ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳು - ಸಹಾಯಾನುದಾನ" ರಡಿಯಲ್ಲಿ ಒದಗಿಸಿದ ಅನುದಾನವನ್ನು ಖಾಸಗಿ ದೇವಸ್ಥಾನ/ ಸಂಸ್ಥೆಗಳ ದುರಸ್ಥಿ / ಜೀರ್ಣೋದ್ಧಾರಗಳಿಗೆ ಮಂಜೂರು ಮಾಡಲಾಗುವುದು.

1. ಅಸ್ತಿತ್ವದಲ್ಲಿರುವ ಖಾಸಗಿ ಧಾರ್ಮಿಕ ಸಂಸ್ಥೆಗಳನ್ನು ಮಾತ್ರ ಅನುದಾನಕ್ಕಾಗಿ ಪರಿಗಣಿಸಲಾಗುವುದು. ಹೊಸ ಖಾಸಗಿ ದೇವಸ್ಥಾನದ ನಿರ್ಮಾಣಕ್ಕಾಗಿ ಅನುದಾನ ನೀಡಲಾಗುವುದಿಲ್ಲ.

2. ಸರ್ಕಾರವು ಖಾಸಗಿ ಧಾರ್ಮಿಕ ಸಂಸ್ಥೆಗಳ ದುರಸ್ಥಿ / ಜೀರ್ಣೋದ್ಧಾರ, ಮುಂತಾದವುಗಳಿಗೆ ಸರ್ಕಾರದಲ್ಲಿ ದೊರೆಯುವ ಅನುದಾನದ ಲಭ್ಯತೆಗೊಳಪಟ್ಟು ಗರಿಷ್ಠ ರೂ. 25.00 ಲಕ್ಷದವರೆಗೆ ಅನುದಾನವನ್ನು ಬಿಡುಗಡೆ ಮಾಡಲಾಗುವುದು. ಖಾಸಗಿ ದೇವಸ್ಥಾನ/ ಧಾರ್ಮಿಕ ಸಂಸ್ಥೆಗಳ ಈ ಕೆಳಕಂಡ ಉದ್ದೇಶಗಳಿಗೆ ಆದ್ಯತೆ ನೀಡುವುದು:-

    1. ಗರ್ಭಗುಡಿಯ ದುರಸ್ಥಿ
    2. ಪೂಜಾ ಸ್ಥಾನಗಳ ದುರಸ್ತಿ ಹಾಗೂ ನವೀಕರಣ,
    3. ದೇವಸ್ಥಾನದ ಮಹಾ ದ್ವಾರದ ದುರಸ್ಥಿ
    4. ಭಕ್ತಾದಿಗಳು ದೇವರ ದರ್ಶನಕ್ಕಾಗಿ ಕಾಯುವ ಪ್ರಧಾನ ಮಂದಿರಗಳ ದುರಸ್ಥಿ,
    5. ಪ್ರಾಕಾರಗಳ ದುರಸ್ಥಿ
    6. ಪಿಲ್ಲರುಗಳ ದುರಸ್ಥಿ
    7. ಧ್ವಜಸ್ಥಂಭಗಳ ದುರಸ್ಥಿ / ನಿರ್ಮಾಣ
    8. ಕಾಂಪೌಂಡ್ ಗೋಡೆಗಳ ದುರಸ್ಥಿ / ನಿರ್ಮಾಣ,
    9. ಭಕ್ತಾದಿಗಳಿಗೆ ನಾಗರೀಕ ಸೇವಾ ಸೌಲಭ್ಯ ಒದಗಿಸುವುದು,
    10. ದೇವಸ್ಥಾನದ ಅಕ್ಕಪಕ್ಕದಲ್ಲಿ ಕಲ್ಯಾಣ ಮಂಟಪ ನಿರ್ಮಾಣ.
    11. ರಥ / ರಥದ ಮನೆ ದುರಸ್ಥಿ / ನಿರ್ಮಾಣ
    12. ಶಿಲ್ಪ, ಶಿಲ್ಪಗಳ ಭಾಗಗಳ ದುರಸ್ಥಿ,

3. ಅನುದಾನ ಬಯಸುವ ಖಾಸಗಿ ಧಾರ್ಮಿಕ ಸಂಸ್ಥೆಗಳು ಕೋರಿಕೆ ಪತ್ರವನ್ನು, ಸರ್ಕಾರ/ [illegible]

ಅನುದಾನ ಮಂಜೂರು ಮಾಡಿದಲ್ಲಿ ಅನುದಾನ ಬಿಡುಗಡೆಯಾದ ಖಾಸಗಿ ಸಂಸ್ಥೆಗಳು ಉದ್ದೇಶಿತ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಪರಿಶೀಲನೆಗೆ ಒಳಪಡಿಸಿದ ನಂತರ ಮಂಜೂರಾದ ಅನುದಾನ ರೂ.5.00 ಲಕ್ಷಕ್ಕಿಂತ ಕಡಿಮೆಯಾಗಿದ್ದರೆ, ಪೂರ್ಣ ಹಣವನ್ನು ಕ್ರಾಸ್ಡ್ ಚೆಕ್ ಮುಖಾಂತರ ಏಕ ಕಂತಿನಲ್ಲಿ ಸಂಸ್ಥೆಗೆ ಬಿಡುಗಡೆ ಮಾಡುವುದು. ನಂತರ ಸದರಿ ಸಂಸ್ಥೆಗಳಿಂದ ಬಳಕೆ ಪ್ರಮಾಣ ಪತ್ರ ಪಡೆಯುವುದು.

4. ಮಂಜೂರಾದ ಅನುದಾನವು ರೂ.10.00 ಲಕ್ಷಕ್ಕೂ ಮೇಲ್ಪಟ್ಟಿದ್ದರೆ, ಅನುದಾನವನ್ನು ಎರಡು ಸಮಾನ ಕಂತುಗಳಲ್ಲಿ ಸಂಸ್ಥೆಯ ಹೆಸರಿನಲ್ಲಿ ಬಿಡುಗಡೆ ಮಾಡುವುದು. ಮೊದಲನೇ ಕಂತನ್ನು ಪಡೆದ ಸಂಸ್ಥೆಯು ಉದ್ದೇಶಿತ ಕಾಮಗಾರಿಯನ್ನು ಕೈಗೆತ್ತಿಕೊಂಡು, ಈ ಅನುದಾನವನ್ನು ಖರ್ಚು ಮಾಡಿದ ನಂತರ, ಸದರಿ ಕಾಮಗಾರಿಯ ಪ್ರಗತಿ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ (ಲೋಕೋಪಯೋಗಿ ಇಲಾಖೆಯ ಅಥವಾ ಜಿಲ್ಲಾ ಪಂಚಾಯತ್ ಅಭಿಯಂತರರಿಂದ) ಪರಿವೀಕ್ಷಣೆ ಮಾಡಿಸಿ, ಅವರ ಅನುಮೋದನೆಯೊಂದಿಗೆ ಮೊದಲನೆ ಕಂತಿನ ಬಳಕೆ ಪ್ರಮಾಣ ಪತ್ರವನ್ನು ಸಂಬಂಧಿತ ಪ್ರಾಧಿಕಾರಕ್ಕೆ ಸಲ್ಲಿಸಿದ ನಂತರ, ಎರಡನೇ ಕಂತನ್ನು ಬಿಡುಗಡೆ ಮಾಡುವುದು.

5. ಸರ್ಕಾರದಿಂದ ಮಂಜೂರಾದ ಅನುದಾನದ ಜೊತೆಗೆ ಖಾಸಗಿ ಧಾರ್ಮಿಕ ಸಂಸ್ಥೆಗಳು ಅಂದಾಜು ಪಟ್ಟಿಯಂತೆ ಉಳಿದ ವೆಚ್ಚವನ್ನು ಸಂಸ್ಥೆಯ ನಿಧಿಯಿಂದ ಭರಿಸಿ, ಕಾಮಗಾರಿಯನ್ನು ಪೂರ್ಣಗೊಳಿಸುವುದು. ಸರ್ಕಾರದ ಅನುದಾನವನ್ನು ಉದ್ದೇಶಿತ ಕಾಮಗಾರಿಗಳಿಗೆ ಬಳಸಿರುವ ಬಗ್ಗೆ ಸರಿಯಾದ ಲೆಕ್ಕಪತ್ರಗಳನ್ನು ನಿರ್ವಹಿಸಿ, ಹಣ ಅಪವ್ಯಯವಾಗದಂತೆ ಸಂಬಂಧಪಟ್ಟ ಸಂಸ್ಥೆಗಳು ನಿಗಾ ವಹಿಸುವುದು.

6. ಸರ್ಕಾರದಿಂದ ಬಿಡುಗಡೆಯಾದ ಅನುದಾನದ ಎರಡನೇ ಕಂತು ಬಿಡುಗಡೆ ಮಾಡುವಾಗ ಮೊದಲನೇ ಕಂತಿನ ಅನುದಾನ ಉಪಯೋಗಿಸಿದ ಬಗ್ಗೆ ಪ್ರಮಾಣ ಪತ್ರ (Utilisation Certificate) ಸಲ್ಲಿಸುವುದು ಮತ್ತು ಎರಡನೇ ಕಂತಿನ ಅನುದಾನವನ್ನು ಉಪಯೋಗಿಸಿದ ನಂತರ, ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಗಳಿಗೆ ಸಲ್ಲಿಸುವುದು.

III. [illegible]

ಮುಂಗಡ ಪತ್ರದ ಲೆಕ್ಕ ಶೀರ್ಷಿಕೆ "2250-00-1-03 (10)-ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳು - ಸಹಾಯಾನುದಾನ" ರಡಿಯಲ್ಲಿ ಒದಗಿಸಿದ ಅನುದಾನವನ್ನು ಮಠಗಳ ದುರಸ್ಥಿ / ಜೀರ್ಣೋದ್ಧಾರ ಇತ್ಯಾದಿಗಳಿಗೆ ಮಂಜೂರು ಮಾಡಲಾಗುವುದು.

1. ಅಸ್ತಿತ್ವದಲ್ಲಿರುವ ಮಠಗಳನ್ನು ಮಾತ್ರ ಅನುದಾನಕ್ಕಾಗಿ ಪರಿಗಣಿಸಲಾಗುವುದು.

2. ಸರ್ಕಾರವು ಮಠಗಳ ದುರಸ್ಥಿ / ಜೀರ್ಣೋದ್ಧಾರ ಮುಂತಾದವುಗಳಿಗೆ ಸರ್ಕಾರದಲ್ಲಿ ದೊರೆಯುವ ಅನುದಾನದ ಲಭ್ಯತೆಗಳಿಗೊಳಪಟ್ಟು ಗರಿಷ್ಠ ರೂ.50.00ಲಕ್ಷ ಅನುದಾನವನ್ನು ಬಿಡುಗಡೆಗೊಳಿಸಲಾಗುವುದು. ಮಠಗಳ ಈ ಕೆಳಕಂಡ ದುರಸ್ಥಿ / ಜೀರ್ಣೋದ್ಧಾರ/ ನವನಿರ್ಮಾಣಕ್ಕೆ ಆದ್ಯತೆ ನೀಡಲಾಗುವುದು.

   1. ಮಠದ ಕಟ್ಟಡ ದುರಸ್ಥಿ
   2. ಮಠದ ಅಧೀನದಲ್ಲಿರುವ ದೇವಸ್ಥಾನಗಳ ದುರಸ್ಥಿ / ಜೀರ್ಣೋದ್ಧಾರ
   3. ಮಠಕ್ಕೆ ಬರುವ ಭಕ್ತಾದಿಗಳಿಗೆ ನಾಗರೀಕ ಸೇವಾ ಸೌಲಭ್ಯ ಒದಗಿಸುವ ಕಾಮಗಾರಿ.

3. ಅನುದಾನ ಬಯಸುವ ಮಠಗಳು ಕೋರಿಕೆ ಪತ್ರವನ್ನು ಸರ್ಕಾರ/ ಆಯುಕ್ತರು/ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಬಹುದು. ಇಂತಹ ಮಠಗಳಿಗೆ ಸರ್ಕಾರವು ಅನುದಾನ ಮಂಜೂರು ಮಾಡಿದಲ್ಲಿ ಅನುದಾನ ಬಿಡುಗಡೆಯಾದ ಮಠಗಳು ಉದ್ದೇಶಿತ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಪರಿಶೀಲನೆಗೆ ಒಳಪಡಿಸಿದ ನಂತರ, ಮಂಜೂರಾದ ಅನುದಾನ ರೂ.5.00 ಲಕ್ಷಕ್ಕಿಂತ ಕಡಿಮೆಯಾಗಿದ್ದರೆ, ಪೂರ್ಣ ಹಣವನ್ನು ಕ್ರಾಸ್ಡ್ ಚೆಕ್ ಮುಖಾಂತರ ಏಕ ಕಂತಿನಲ್ಲಿ ಮಠಕ್ಕೆ ಬಿಡುಗಡೆ ಮಾಡುವುದು. ನಂತರ ಸಂಬಂಧಪಟ್ಟ ಮಠದ ವತಿಯಿಂದ ಬಳಕೆ ಪ್ರಮಾಣ ಪತ್ರ ಪಡೆಯುವುದು.

4. ಮಂಜೂರಾದ ಅನುದಾನವು ರೂ.5.00 ಲಕ್ಷಕ್ಕೂ ಮೇಲ್ಪಟ್ಟಿದ್ದರೆ, ಅನುದಾನವನ್ನು

ಮೊದಲನೇ ಕಂತನ್ನು [illegible] ಉದ್ದೇಶಿತ ಕಾಮಗಾರಿಯನ್ನು [illegible] ಈ ಅನುದಾನವನ್ನು ಖರ್ಚು ಮಾಡಿದ ನಂತರ ಸದರಿ ಕಾಮಗಾರಿಯ ಪ್ರಗತಿ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ (ಲೋಕೋಪಯೋಗಿ ಇಲಾಖೆಯ ಅಥವಾ ಜಿಲ್ಲಾ ಪಂಚಾಯತ್ ಅಭಿಯಂತರರಿಂದ) ಪರಿವೀಕ್ಷಣೆ ಮಾಡಿಸಿ, ಅವರ ಅನುಮೋದನೆಯೊಂದಿಗೆ ಮೊದಲನೆ ಕಂತಿನ ಬಳಕೆ ಪ್ರಮಾಣ ಪತ್ರವನ್ನು ಸಂಬಂಧಿತ ಪ್ರಾಧಿಕಾರಕ್ಕೆ ಸಲ್ಲಿಸಿದ ನಂತರ, ಎರಡನೇ ಕಂತನ್ನು ಬಿಡುಗಡೆ ಮಾಡುವುದು.

5. ಸರ್ಕಾರದಿಂದ ಮಂಜೂರಾದ ಅನುದಾನದ ಜೊತೆಗೆ ಮಠಗಳು ಅಂದಾಜು ಪಟ್ಟಿಯಂತೆ ಉಳಿದ ವೆಚ್ಚವನ್ನು ಮಠದ ನಿಧಿಯಿಂದ ಭರಿಸಿ, ಖರ್ಚು ಮಾಡಿ, ಕಾಮಗಾರಿಯನ್ನು ಪೂರ್ಣಗೊಳಿಸುವುದು. ಸರ್ಕಾರದ ಅನುದಾನ ಉದ್ದೇಶಿತ ಕಾಮಗಾರಿಗಳಿಗೆ ಬಳಸಿರುವ ಬಗ್ಗೆ ಸರಿಯಾದ ಲೆಕ್ಕಪತ್ರಗಳನ್ನು ನಿರ್ವಹಿಸಿ; ಹಣ ಅಪವ್ಯಯವಾಗದಂತೆ ಸಂಬಂಧಪಟ್ಟ ಮಠವು ನಿಗಾ ವಹಿಸುವುದು.

6. ಸರ್ಕಾರದಿಂದ ಬಿಡುಗಡೆಯಾದ ಅನುದಾನದ ಎರಡನೇ ಕಂತು ಬಿಡುಗಡೆ ಮಾಡುವಾಗ ಮೊದಲನೇ ಕಂತಿನ ಅನುದಾನ ಉಪಯೋಗಿಸಿದ ಬಗ್ಗೆ ಪ್ರಮಾಣ ಪತ್ರ (Utilisation Certificate) ಸಲ್ಲಿಸುವುದು ಮತ್ತು ಎರಡನೇ ಕಂತಿನ ಅನುದಾನವನ್ನು ಉಪಯೋಗಿಸಿದ ನಂತರ, ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಗಳಿಗೆ ಸಲ್ಲಿಸುವುದು.

( ಕೆ.ಎಸ್. ಪ್ರಭಾಕರ )
ಸರ್ಕಾರದ ಕಾರ್ಯದರ್ಶಿ
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

ಇವರಿಗೆ,

(1) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
(2) ಮಾನ್ಯ ಮುಖ್ಯಮಂತ್ರಿಗಳ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
(3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ.
(4) ಎಲ್ಲಾ ಪ್ರಾದೇಶಿಕ ಆಯುಕ್ತರು,
(5) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
(6) ಎಲ್ಲಾ ಜಿಲ್ಲಾಧಿಕಾರಿಗಳು,
(7) ಮಾನ್ಯ ಮುಜರಾಯಿ ಸಚಿವರ ಆಪ್ತ ಕಾರ್ಯದರ್ಶಿಗಳು
(8) ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು.

C.S.D

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ - ಆರಾಧನಾ ಯೋಜನೆಯ ಮಾರ್ಗಸೂಚಿಯಲ್ಲಿರುವ ಹೊಸದಾಗಿ ನಿರ್ಮಾಣ ಮಾಡುವ ಕಾಮಗಾರಿಯ ಮೊತ್ತವನ್ನು ಪರಿಷ್ಕರಿಸುವ ಬಗ್ಗೆ

ಓದಲಾಗಿದೆ.- (1) ಸರ್ಕಾರದ ಆದೇಶ ಸಂಖ್ಯೆ ಕಂಇ 67 ಮುಸರ 2007
ದಿನಾಂಕ:10-10-2008
(2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ ಆರಾಧನಾ ಸಿಆರ್ 3/
2011-12 ದಿನಾಂಕ:15-06-2011

* * *

ಪ್ರಸ್ತಾವನೆ:-

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶ ದಿನಾಂಕ:10-10-2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ಪರಿಷ್ಕೃತ ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ:15-06-2011ರಲ್ಲಿ, ಆರಾಧನಾ ಯೋಜನೆಯಡಿ ಪ್ರತಿ ವರ್ಷ ಸರ್ಕಾರದ ಆಯವ್ಯಯದಲ್ಲಿ ನಿಗದಿಪಡಿಸಿರುವ ಅನುದಾನದ ಮೊತ್ತವನ್ನು ರಾಜ್ಯದ 224 ವಿಧಾನ ಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಿ, ಸರ್ಕಾರದ ಆದೇಶ ಹೊರಡಿಸಿದ ನಂತರ ಅನುದಾನವನ್ನು ಆಯಾ ಜಿಲ್ಲಾಧಿಕಾರಿಗಳಿಗೆ ಕಳುಹಿಸಲಾಗುತ್ತದೆ. ಮಾರ್ಗಸೂಚಿಯಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ಹೊಸದಾಗಿ ಪೂಜಾ ಸ್ಥಳ, ಭಜನಾ ಮಂದಿರ, ಪ್ರಾರ್ಥನಾ ಮಂದಿರಗಳ ಹಾಗೂ ನವನಿರ್ಮಾಣಗಳಿಗೆ ನಿಗದಿಪಡಿಸಿರುವ ಗರಿಷ್ಠ ಅನುದಾನದ ಮೊತ್ತ ₹1.00 ಲಕ್ಷಗಳಾಗಿರುತ್ತದೆ. ಆದೇಶವು ಜಾರಿಯಾಗಿ ಮೂರು ವರ್ಷಗಳಾಗಿದ್ದು, ಇತ್ತೀಚಿಗೆ ಕಟ್ಟಡ ಸಾಮಾಗ್ರಿಗಳ ಮಾರುಕಟ್ಟೆ ಹಾಗೂ ಮಜೂರಿ ದರಗಳು ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಹೊಸದಾಗಿ ಪೂಜಾಸ್ಥಳ, ಭಜನಾ ಮಂದಿರ, ಪ್ರಾರ್ಥನಾ ಮಂದಿರಗಳ ಹಾಗೂ ನವನಿರ್ಮಾಣಗಳಿಗೆ ಪ್ರಸ್ತುತ ನಿಗದಿಪಡಿಸಿರುವ ₹1.00 ಲಕ್ಷಗಳ ಮಿತಿಯನ್ನು ₹2.50 ಲಕ್ಷಗಳಿಗೆ ಪರಿಷ್ಕರಿಸಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಧಾರ್ಮಿಕ ದತ್ತಿ ಆಯುಕ್ತರು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರಿ ಆದೇಶ ಸಂಖ್ಯೆ:ಕಂಇ 203 ಮುಅಬಿ 2011
ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2011

ಮೇಲೆ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ಹೊಸದಾಗಿ ಪೂಜಾ ಸ್ಥಳ, ಭಜನಾ ಮಂದಿರ, ಪ್ರಾರ್ಥನಾ ಮಂದಿರಗಳ ನವನಿರ್ಮಾಣ ಉದ್ದೇಶಕ್ಕಾಗಿ ನಿಗದಿಪಡಿಸಲಾದ, ಅನುದಾನದ ಮೊತ್ತ ₹.1.00 ಲಕ್ಷಗಳ ಮಿತಿಯನ್ನು ₹.1.75 ಲಕ್ಷ (ಒಂದು ಲಕ್ಷದ ಎಪ್ಪತ್ತೈದು ರೂಪಾಯಿಗಳು ಮಾತ್ರ)ಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಹೆಚ್ಚಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಕೆ. ಉಮಾಪತಿ) 14/9
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಇವರಿಗೆ,
1) ಮಹಾಲೇಖಪಾಲಕರು, (ಎ & ಇ) / (ಲೆಕ್ಕ ಪತ್ರ) ಕರ್ನಾಟಕ, ಬೆಂಗಳೂರು.
2) ಪ್ರಾದೇಶಿಕ ಆಯುಕ್ತರು, ಬೆಂಗಳೂರು / ಮೈಸೂರು / ಗುಲ್ಬರ್ಗಾ / ಬೆಳಗಾಂ ವಿಭಾಗಗಳು.
3) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
4) ಎಲ್ಲಾ ಜಿಲ್ಲಾಧಿಕಾರಿಗಳು - ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ.
5) ಎಲ್ಲಾ ತಹಶೀಲ್ದಾರ್‌ಗಳು - ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ.
6) ಮಾನ್ಯ ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ, ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರ ಆಪ್ತ ಕಾರ್ಯದರ್ಶಿಗಳು.
7) ಸರ್ಕಾರದ ಅಧೀನ ಕಾರ್ಯದರ್ಶಿಗಳು, ಆಡಳಿತ ಇಲಾಖೆ (ವೆಚ್ಚ-7) ವಿಧಾನಸೌಧ, ಬೆಂಗಳೂರು.
8) ನಿಯಂತ್ರಕರು, ರಾಜ್ಯ ಲೆಕ್ಕ ಪತ್ರ ಇಲಾಖೆ, ಬೆಂಗಳೂರು.
9) ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
10) ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿ.

ಕೆ

## ಆರಾಧನಾ ಮಾರ್ಗಸೂಚಿಗಳು

### ಅನುಬಂಧ

ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ಪ್ರತಿಯೊಂದು ವಿಧಾನ ಸಭಾ ಕ್ಷೇತ್ರದಲ್ಲೂ ಆ ಕ್ಷೇತ್ರದ ವಿಧಾನ ಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ಒಂದು ಆರಾಧನಾ ಸಮಿತಿ ಇರತಕ್ಕದ್ದು. ಈ ಸಮಿತಿಯನ್ನು ರಚಿಸಲು ಸರ್ಕಾರವು ಅಧಿಕಾರ ಹೊಂದಿರುತ್ತದೆ. ಅದರಲ್ಲಿ ಕೆಳಕಂಡವರು ಸದಸ್ಯರಾಗಿರುವರು.

| | |
|---|---|
| 1) ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2) ಸಂಬಂಧಿಸಿದ ತಹಸೀಲ್ದಾರ್ | ಸದಸ್ಯ ಕಾರ್ಯದರ್ಶಿ |
| 3) ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಭಿಯಂತರರು | ಸದಸ್ಯರು |
| 4) ಜಿಲ್ಲಾ ಪಂಚಾಯತ್ ಕಾರ್ಯನಿರ್ವಾಹಕ ಅಭಿಯಂತರರು | ಸದಸ್ಯರು |
| 5) ಓರ್ವ ಮಹಿಳೆ | ಸದಸ್ಯರು |
| 6) ಪರಿಶಿಷ್ಟ ಜಾತಿಯ ಓರ್ವ ವ್ಯಕ್ತಿ | ಸದಸ್ಯರು |
| 7) ಪರಿಶಿಷ್ಟ ಪಂಗಡದಿಂದ ಓರ್ವ ವ್ಯಕ್ತಿ | ಸದಸ್ಯರು |
| 8) ಸಾಮಾನ್ಯ ವರ್ಗದವರಿಂದ ಓರ್ವ ವ್ಯಕ್ತಿ | ಸದಸ್ಯರು. |

ವಿಧಾನ ಪರಿಷತ್ ಸದಸ್ಯರು ಇಷ್ಟ ಪಡುವ ಕಾರ್ಯ ವ್ಯಾಪ್ತಿಗೆ ಬರುವಂತಹ ಒಂದು ತಾಲ್ಲೂಕು / ವಿಧಾನ ಸಭಾ ಕ್ಷೇತ್ರಕ್ಕೆ ಹೆಚ್ಚುವರಿಯಾಗಿ ಆರಾಧನಾ ಸಮಿತಿಗೆ ಸದಸ್ಯರನ್ನಾಗಿ ನೇಮಕ ಮಾಡಬೇಕು.

1) ವಿಧಾನ ಸಭಾ ಸದಸ್ಯರು ಸಚಿವರಾಗಿದ್ದಲ್ಲಿ ಅಥವಾ ಇನ್ನಿತರ ಕಾರ್ಯಭಾರದಿಂದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವುದು ಸಾಧ್ಯವಿಲ್ಲದಿದ್ದಲ್ಲಿ ಅವರ ಸೂಚನೆ ಮೇರೆಗೆ ಅದೇ ಕ್ಷೇತ್ರದ ಬೇರೊಬ್ಬ ವ್ಯಕ್ತಿಯನ್ನು ಸಮಿತಿಯ ಅಧ್ಯಕ್ಷರನ್ನಾಗಿ ಸರ್ಕಾರ ನೇಮಿಸಬಹುದು.

2) ಈ ಸಮಿತಿಗಳ ಅವಧಿ ಐದು ವರ್ಷಗಳಾಗಿದ್ದು, ಸರ್ಕಾರ ಇಚ್ಛಿಸಿದಲ್ಲಿ ಸಮಿತಿಯನ್ನು ಪುನರ್ ರಚಿಸುವ ಅಧಿಕಾರ ಸರ್ಕಾರಕ್ಕೆ ಇರುತ್ತದೆ.

3) ಈ ಯೋಜನೆಯು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಲಂಬಾಣಿ ತಾಂಡ, ವಡ್ಡರಕೇರಿ, ಹಿಂದುಳಿದ 1ನೇ ವರ್ಗ ಮತ್ತು ಅಲ್ಪ ಸಂಖ್ಯಾತ ವರ್ಗಗಳಿಗೆ ಸೇರಿದ ಜನರು ವಾಸಿಸುವ ಸ್ಥಳಗಳಲ್ಲಿ ದೇವಾಲಯ, ಪೂಜಾ ಮಂದಿರ ಹಾಗೂ ಪ್ರಾರ್ಥನಾ ಮಂದಿರಗಳ ದುರಸ್ತಿ, ಜೀರ್ಣೋದ್ಧಾರ ಹಾಗೂ ನವ ನಿರ್ಮಾಣಗಳಿಗೆ ಪ್ರಸ್ತುತ ಇರುವ ಮಿತಿಯನ್ನು ಹೆಚ್ಚಿಸಿ ಕೆಳಕಂಡಂತೆ ನಿಗದಿ ಪಡಿಸಿದೆ.

ಕಳುಹಿಸಬೇಕು. ಅನಂತರ ಅವರು ಸಂಬಂಧಿಸಿದ ತಹಸೀಲ್ದಾರ್‌ರವರಿಗೆ ಕಳುಹಿಸಬೇಕು. ಈ ಅನುದಾನವು ತಹಸೀಲ್ದಾರರ ಅಭಿರಕ್ಷೆಯಲ್ಲಿರಬೇಕು. ಒಂದು ವಿಧಾನ ಸಭಾ ಕ್ಷೇತ್ರವಲ್ಲಿ ಒಂದಕ್ಕಿಂತ ಹೆಚ್ಚಿನ ತಾಲ್ಲೂಕುಗಳು ಬರುವ ಸಂದರ್ಭಗಳಲ್ಲಿ ಅನುದಾನವನ್ನು ಹೋಬಳಿ ಅಥವಾ ಗ್ರಾಮಗಳಿಗೆ ಸಮನಾಗಿ ಹಂಚಿಕೆಯನ್ನು ಆಯಾಯ ತಹಸೀಲ್ದಾರರಿಗೆ ಜಿಲ್ಲಾಧಿಕಾರಿಗಳು ಮಾಡಬೇಕು. ತಹಸೀಲ್ದಾರರು ವಿಧಾನ ಸಭಾ ಕ್ಷೇತ್ರದಲ್ಲಿ ಬರುವ ಎಲ್ಲಾ ಗ್ರಾಮಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ, ಹಿಂದುಳಿದ 1ನೇ ವರ್ಗ ಮತ್ತು ಅಲ್ಪ ಸಂಖ್ಯಾತರು ವಾಸಿಸುವ ಸ್ಥಳದಲ್ಲಿ ಕೇರಿ ಜೀರ್ಣೋದ್ಧಾರ ನವ ನಿರ್ಮಾಣಕ್ಕೆ ಅರ್ಜಿಗಳನ್ನು ಪ್ರಚಾರದ ನಂತರ ಪಡೆದು ಅವುಗಳನ್ನು ಪರಿಶೀಲಿಸಿ ಸ್ಥಳೀಯ ಸರ್ಕಾರಿ ಅಥವಾ ಖಾಸಗಿ ಇಂಜಿನಿಯರುಗಳಿಂದ ಅಂದಾಜುಪಟ್ಟಿ ತಯಾರಿಸಿ ಸದರಿ ಅಂದಾಜುಪಟ್ಟಿಯನ್ನು ಆರಾಧನಾ ಸಮಿತಿಯ ಸದಸ್ಯರಲ್ಲಿ ಒಬ್ಬರಾದ ಜಿಲ್ಲಾ ಪಂಚಾಯತ್ ಕಾರ್ಯನಿರ್ವಾಹಕ ಅಭಿಯಂತರರು ಪರಿಶೀಲಿಸಿ ತಾಂತ್ರಿಕ ದೃಢೀಕರಣ ನೀಡಿದ ನಂತರ ಅವುಗಳನ್ನು ಆರಾಧನಾ ಸಮಿತಿಯ ಸಭೆಯಲ್ಲಿ ಮಂಡಿಸಬೇಕು. ಆರಾಧನಾ ಸಮಿತಿಯು ಪ್ರಸ್ತಾವನೆಗೆ ಅನುಮೋದನೆ ನೀಡಿದ ನಂತರ ಕಾಮಗಾರಿಯು ಅಂದಾಜು ಪಟ್ಟಿ ರೂ.30,000/- ಮೀರದಿದ್ದಲ್ಲಿ ತಹಸೀಲ್ದಾರರು ಆಡಳಿತಾತ್ಮಕ ಮಂಜೂರಾತಿ ನೀಡಿ ಕಾಮಗಾರಿಯನ್ನು ಪ್ರಾರಂಭಿಸಲು ವ್ಯವಸ್ಥೆ ಮಾಡುವುದು ಹಾಗೂ ಮಂಜೂರಾತಿ ನೀಡಿದ ಕಾಮಗಾರಿಗಳ ಪಟ್ಟಿಯನ್ನು ಜಿಲ್ಲಾಧಿಕಾರಿಗಳಿಗೆ ಮತ್ತು ಉಪ ವಿಭಾಗಾಧಿಕಾರಿಗಳಿಗೆ ಸಲ್ಲಿಸುವುದು. ಸದರಿ ಯೋಜನೆಯಡಿ ದುರಸ್ತಿ, ಜೀರ್ಣೋದ್ಧಾರ ಮತ್ತು ಅಭಿವೃದ್ಧಿ ಕೈಗೊಳ್ಳುವ ಕಾಮಗಾರಿಯ ಅಂದಾಜು ಪಟ್ಟಿಗೆ ತಹಸೀಲ್ದಾರರವರ ಆಡಳಿತಾತ್ಮಕ ಮಂಜೂರಾತಿ ನೀಡುವುದು. ಇದನ್ನು ಹೊರತು ಪಡಿಸಿ ನಿರ್ಮಾಣದ ಅಂದಾಜುಪಟ್ಟಿಗೆ ಗರಿಷ್ಠ ಮಿತಿ ರೂ.1.25 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವುದು ಜಿಲ್ಲಾಧಿಕಾರಿಗಳ ವ್ಯಾಪ್ತಿಗೆ ಒಳಪಡುತ್ತದೆ.

ಜ) ಸದರಿ ಯೋಜನೆಯಡಿ ಮಂಜೂರಾದ ಕಾಮಗಾರಿಗಳು ಮಾರ್ಗಸೂಚಿಗೆ ಅನುಗುಣವಾಗಿ ನಿರ್ದಿಷ್ಟ ಉದ್ದೇಶ ಮತ್ತು ಜಾತಿಗೆ ಅನುಗುಣವಾಗಿರತಕ್ಕದ್ದು. ಯಾವುದೇ ಸಂದರ್ಭದಲ್ಲಿ ಇದನ್ನು ಬದಲಿಸತಕ್ಕದ್ದಲ್ಲ.

ಝ) ಆರಾಧನಾ ಯೋಜನೆಯಡಿ ಅನುದಾನವನ್ನು [illegible] [illegible] ಮಂಜೂರು ಮಾಡತಕ್ಕದ್ದಲ್ಲ.

ಆಯುಕ್ತರು ನಂತರ ಇವುಗಳನ್ನು ಜೋಡಿಸಿ ಸಹಿ ಮಾಡಿ ಮಹಾಲೇಖಪಾಲರಿಗೆ ಕಳುಹಿಸುವುದು.

ಋ) ಈ ಯೋಜನೆಯಡಿ ಅನುದಾನ ಮಂಜೂರು ಮಾಡುವಾಗ ಎಲ್ಲಾ ಗ್ರಾಮಗಳಲ್ಲಿ ಬರುವ ಕೇರಿ / ತಾಂಡಗಳಲ್ಲಿ ಆದ್ಯತೆಯ ಮೇರೆಗೆ ಸಮತೋಲನವನ್ನು ಕಾಪಾಡಿಕೊಳ್ಳಬೇಕು. ಒಂದು ಜನಾಂಗದವರು ವಾಸಿಸುವ ಪ್ರದೇಶಕ್ಕೆ ಮತ್ತ ಮತ್ತೆ ಅನುದಾನ ನೀಡುವುದನ್ನು ಕಡಿಮೆ ಮಾಡಿ ಆರಾಧನಾ ಯೋಜನೆಯಡಿ ಅನುದಾನ ಮಂಜೂರಾಗದ ಪ್ರದೇಶಕ್ಕೆ ಕಾಮಗಾರಿಗಳನ್ನು ಗುರುತಿಸಿ ಅನುದಾನ ಮಂಜೂರು ಮಾಡಿ ಈ ಯೋಜನೆಯ ಸೌಲಭ್ಯಗಳನ್ನು ಎಲ್ಲಾ ಗ್ರಾಮಗಳಿಗೂ ಸಮಾನವಾಗಿ ದೊರಕುವಂತೆ ನೋಡಿಕೊಳ್ಳಬೇಕು.

ಎ) ಒಂದೇ ವಿಧಾನ ಸಭಾ ಕ್ಷೇತ್ರದಲ್ಲಿ ಒಂದಕ್ಕಿಂತ ಹೆಚ್ಚು ತಾಲ್ಲೂಕುಗಳು / ಹೋಬಳಿ ಬರುತ್ತಿದ್ದಲ್ಲಿ ಅಂತಹ ಸಂದರ್ಭದಲ್ಲಿ ವಿಧಾನ ಸಭಾ ಕ್ಷೇತ್ರ ಕೇಂದ್ರ ಸ್ಥಾನ ಬರುವ ತಾಲ್ಲೂಕು ತಹಸೀಲ್ದಾರರು ಆರಾಧನಾ ಸಮಿತಿಗಳನ್ನು ಕನಿಷ್ಠ ಎರಡು ತಿಂಗಳಿಗೆ ಒಂದು ಬಾರಿಯಾದರೂ ಸಭೆ ಕರೆದು ಯೋಜನೆಯ ಅನುಷ್ಠಾನದ ಬಗ್ಗೆ ಪರಾಮರ್ಶಿಸುತ್ತಿದ್ದು, ಈ ಸಭೆಗೆ ಉಳಿದ ತಾಲ್ಲೂಕುಗಳ ತಹಸೀಲ್ದಾರರುಗಳನ್ನು ಆಹ್ವಾನಿಸಿ, ಸಮಿತಿಯಿಂದ ಪ್ರಸ್ತಾವಿತ ಕಾಮಗಾರಿಗೆ ಮಂಜೂರಾತಿ ಪಡೆದು, ಕಾಮಗಾರಿಯನ್ನು ಮೇಲೆ ತಿಳಿಸಿದಂತೆ ಕೈಗೊಳ್ಳುವುದು.

ಏ) ಆರಾಧನಾ ಯೋಜನೆಯಡಿ ಕೈಗೊಂಡ ಕಾಮಗಾರಿಗಳನ್ನು ಸಹಾಯಕ ಆಯುಕ್ತರು ಇರುವ ಕಡೆ ಸಹಾಯಕ ಆಯುಕ್ತರುಗಳು, ಆಯಾ ಜಿಲ್ಲೆಯ ಮುಜರಾಯಿ ಸಹಾಯಕರುಗಳು, ದತ್ತಿ ಸಹಾಯಕರುಗಳು ಪರಿವೀಕ್ಷಣೆ ಮಾಡಿ ಜಿಲ್ಲಾಧಿಕಾರಿಗಳಿಗೆ ವರದಿ ಸಲ್ಲಿಸತಕ್ಕದ್ದು. ಇವರುಗಳು ಪ್ರತಿ ತಿಂಗಳು ಆರಾಧನಾ ಕಾಮಗಾರಿಗಳ ಪ್ರಗತಿಯನ್ನು ಗಮನಿಸಿ ಪ್ರಗತಿಯ ವರದಿಯನ್ನು ತಯಾರಿಸಿ ಜಿಲ್ಲಾಧಿಕಾರಿಗಳಿಗೆ ಮಂಡಿಸಬೇಕು.

ಐ) ಆರಾಧನಾ ಯೋಜನೆಯಡಿ ಕ್ರಮ ಸಂಖ್ಯೆ 4 ರಲ್ಲಿ ವಿವರಿಸಿದ ಕಾಮಗಾರಿಗಳಿಗೆ ಗರಿಷ್ಠ ಅನುದಾನ ಮಂಜೂರಾದ ನಂತರ ಮತ್ತೆ ಅದೇ ಸಂಸ್ಥೆಗೆ ಅನುದಾನ ಮಂಜೂರು ಮಾಡತಕ್ಕದ್ದಲ್ಲ.

೬) ಯಾವುದೇ ಕಾರಣದಿಂದಲೂ ಉದ್ದೇಶಿತ ಕಾಮಗಾರಿಗೆ ಮಂಜೂರಾದ ಅನುದಾನವನ್ನು ಇತರ ಉದ್ದೇಶಗಳಿಗೆ ಉಪಯೋಗಿಸುವಂತಿಲ್ಲ. ಇಂತಹ ಪ್ರಕರಣಗಳು ಕಂಡು ಬಂದಲ್ಲಿ ಹಣವನ್ನು ಬಿಡುಗಡೆ ಮಾಡಿದ ಅಧಿಕಾರಿಗಳನ್ನು ನೇರವಾಗಿ ಹೊಣೆಗಾರರನ್ನಾಗಿ ಮಾಡಲಾಗುವುದು.

(ರಾಮಚಂದ್ರಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ವಿಷಯ:— ಆರಾಧನಾ ಯೋಜನೆಯನ್ನು ಅಲ್ಪಸಂಖ್ಯಾತ ಕೋಮುಗಳ ದೇವಸ್ಥಾನಗಳಿಗೆ ವಿಸ್ತರಿಸುವ ಬಗ್ಗೆ.

ಓದಲಾಗಿದೆ:— 1) ಸರ್ಕಾರಿ ಆದೇಶ ಸಂಖ್ಯೆ ಕಂಇ 104 ಮುಬಿಮ್ಯಾ 91, ದಿನಾಂಕ: 10—7—1991.

2) ಸರ್ಕಾರಿ ಆದೇಶ ಸಂಖ್ಯೆ ಕಂಇ 410 ಮುಬಿಮ್ಯಾ 92, ದಿನಾಂಕ: 28—11—92.

—o—o—



ಪ್ರಸ್ತಾವನೆ:—

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ 1991—92ನೇ ಸಾಲಿನಲ್ಲಿ ರೂ.1.00 ಕೋಟಿ ಬಿಡುಗಡೆ ಮಾಡುವುದರ ಮೂಲಕ "ಆರಾಧನಾ" ಎಂಬ ಹೊಸ ಯೋಜನೆಯನ್ನು ಜಾರಿಗೆ ತರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಈ ಯೋಜನೆಯ ಸವಲತ್ತುಗಳನ್ನು ಇತರೆ ಹಿಂದುಳಿದ ಪಂಗಡಗಳಿಗೆ ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 65 ಬಿಸಿಎ 86 ದಿನಾಂಕ:13—10—86ರ (ಅನುಬಂಧ—1 ಭಾರತ ಸಂವಿಧಾನದ 15(4)ನೇ ಅನುಚ್ಛೇದ ಅನುಬಂಧ—2 ಭಾರತ ಸಂವಿಧಾನದ 16(4)ನೇ ಅನುಚ್ಛೇದದ ಸಮುದಾಯಗಳು "ಎ" (ಹಿಂದುಳಿದ ಬುಡಕಟ್ಟುಗಳು) ಕ್ರಮ ಸಂಖ್ಯೆ 1 ರಿಂದ 61ರ ವರೆಗಿನ ಸಮುದಾಯ ಜನಾಂಗಕ್ಕೂ, ದೊರಕಿಸಲು ಅನುಮೋದನೆಯನ್ನು ನೀಡಲಾಗಿದೆ.

ಈ ಯೋಜನೆಯನ್ನು ಇತರ ಅಲ್ಪ ಸಂಖ್ಯಾತ ಕೋಮುಗಳಿಗೆ ಸೇರಿದ ಆರಾಧನಾ ಸ್ಥಳಗಳಿಗೂ ಅನ್ವಯವಾಗುವಂತೆ ಸರ್ಕಾರ ವಿವರವಾಗಿ ಪರಿಶೀಲಿಸಿದೆ.

ಕರ್ನಾಟಕ ಅಲ್ಪಸಂಖ್ಯಾತ ಅಭಿವೃದ್ಧಿ ನಿಗಮದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು 1) ಮುಸ್ಲಿಂ 2) ಕ್ರಿಶ್ಚಿಯನ್ 3) ಸಿಖ್ 4) ಜೈನ್ 5) ಬೌದ್ಧ 6) ಪಾರ್ಸಿ ಮತ್ತು 7) ಆಂಗ್ಲೋ ಇಂಡಿಯನ್ ಜನಾಂಗದವರುಗಳನ್ನು ಮತೀಯ ಅಲ್ಪಸಂಖ್ಯಾತರು ಎಂದು ಗುರುತಿಸಿದೆ. ಆರಾಧನಾ ಯೋಜನೆಯನ್ನು ಕರ್ನಾಟಕದ ಅಲ್ಪಸಂಖ್ಯಾತ ಕೋಮುಗಳ ಪೂಜಾ ಸ್ಥಳಗಳಿಗೆ ವಿಸ್ತರಿಸುವ ನಿಲುವನ್ನು ಅನುಷ್ಠಾನಗೊಳಿಸಲು ಈ ಆದೇಶವನ್ನು ತಂದಿರುತ್ತದೆ.

ಸರ್ಕಾರಿ ಆದೇಶ ಸಂಖ್ಯೆ ಕಂಇ 321 ಮುಬಿಮ್ಯಾ 93, ಬೆಂಗಳೂರು, ದಿನಾಂಕ: 7—6—1993

---

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಆರಾಧನಾ ಯೋಜನೆಯನ್ನು ಕೆಳಕಂಡ ಕರ್ನಾಟಕ ಅಲ್ಪಸಂಖ್ಯಾತ ಕೋಮುಗಳಿಗೆ ವಿಸ್ತರಿಸಲು ಆದೇಶಿಸಿದೆ.

1) ಮುಸ್ಲಿಂ,

2) ಕ್ರಿಶ್ಚಿಯನ್

3) ಸಿಖ್

4) ಜೈನ್

5) ಬೌದ್ಧ

6) ಪಾರ್ಸಿ

7) ಆಂಗ್ಲೋ ಇಂಡಿಯನ್

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ಧಾರ್ಮಿಕ ದತ್ತಿ ಇಲಾಖೆಯ ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯ ಕಾರ್ಯಯೋಜನೆ ಕಾರ್ಯಗೊಳಿಸುವ ಕುರಿತು ಮಾರ್ಗಸೂಚಿ.

ಓದಲಾಗಿದೆ:- 1) ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುಇವಿ 2011 ದಿನಾಂಕ:04-07-2011

2) ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುಇವಿ 2011 ದಿನಾಂಕ:04-07-2011

3) ಆಯುಕ್ತರು, ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ:ಆರಾಧನಾ/ಸಿಆರ್/26/2010-11 ದಿ:19-07-2011

*******

ಪ್ರಸ್ತಾವನೆ:-

ಸರ್ಕಾರವು, 2011-12ನೇ ಸಾಲಿನಲ್ಲಿ ಮುಜರಾಯಿ ಇಲಾಖೆಯಲ್ಲಿ "ವಿಶೇಷ ಘಟಕ ಯೋಜನೆ" ಹಾಗೂ "ಗಿರಿಜನ ಉಪಯೋಜನೆ"ಗಳನ್ನು ಜಾರಿಗೊಳಿಸಿದೆ. ಇಲಾಖೆಗೆ ಇದೊಂದು ಹೊಸ ಯೋಜನೆಯಾಗಿದೆ.

ಈ ಯೋಜನೆಗಳ ಅನುಷ್ಠಾನಕ್ಕಾಗಿ ಇಲಾಖೆಗೆ ಲೆಕ್ಕಶೀರ್ಷಿಕೆ "2250-00-800-2-16-ವಿಶೇಷ ಘಟಕ ಯೋಜನೆ-422-(ಯೋಜನೆ)" ಅಡಿಯಲ್ಲಿ ರೂ.838.40 ಲಕ್ಷಗಳನ್ನು ಹಾಗೂ "2250-00-800-2-16-ಗಿರಿಜನ ಉಪಯೋಜನೆ-423(ಯೋಜನೆ)" ಅಡಿಯಲ್ಲಿ ರೂ.324.40 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಹೀಗೆ ಒದಗಿಸಲಾದ ಅನುದಾನದಲ್ಲಿ, ಪ್ರಸ್ತಾಪಿತ ಯೋಜನೆಗಳನ್ನು ಜಾರಿಗೊಳಿಸಲು ಅನುವಾಗುವಂತೆ ಮೇಲೆ ಓದಲಾದ(1) ಮತ್ತು (2)ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ರೂ.279.00 ಲಕ್ಷಗಳನ್ನು (SCSP) ಹಾಗೂ ರೂ.108.20 ಲಕ್ಷಗಳನ್ನು (TSP) ಧಾರ್ಮಿಕ ದತ್ತಿ ಆಯುಕ್ತರವರಿಗೆ ಮಂಜೂರು ಮಾಡಿದೆ. ಅಲ್ಲದೆ, ಮಂಜೂರು ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸಹ ಧಾರ್ಮಿಕ ದತ್ತಿ ಆಯುಕ್ತರವರಿಗೆ ಆದೇಶವನ್ನು ನೀಡಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಧಾರ್ಮಿಕ ದತ್ತಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಕಾರ್ಯಯೋಜನೆಗಳನ್ನು ಕಾರ್ಯಗೊಳಿಸುವ ಬಗ್ಗೆ ಕರಡು ಮಾರ್ಗಸೂಚಿಯನ್ನು ತಯಾರಿಸಿ, ಸದರಿ ಮಾರ್ಗಸೂಚಿಗೆ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರವರ ಕೋರಿಕೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

ಸರ್ಕಾರದ ಆದೇಶ ಸಂಖ್ಯೆ:ಕಂಇ 189 ಮುಅಬಿ 2011, ಬೆಂಗಳೂರು ದಿನಾಂಕ:19-09-2011

2011-12ನೇ ಸಾಲಿನಲ್ಲಿ ಮುಜರಾಯಿ ಇಲಾಖೆಯ "ವಿಶೇಷ ಘಟಕ ಯೋಜನೆ" ಹಾಗೂ "ಗಿರಿಜನ ಉಪಯೋಜನೆ"ಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅನುವಾಗುವಂತೆ ಈ ಆದೇಶದ ಅನುಬಂಧದಲ್ಲಿರುವ ಮಾರ್ಗಸೂಚಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಅನುಮೋದನೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಕೆ. ಉಮಾಪತಿ) 19/9
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

ಇವರಿಗೆ,

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು, ಇವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವ ಸಲುವಾಗಿ ಹಾಗೂ ಪ್ರಕಟಣೆಯ 25 ಪ್ರತಿಗಳನ್ನು ಸರ್ಕಾರಕ್ಕೆ ನೀಡಲು ಕೋರಿದೆ.

ಪ್ರತಿ:

1) ಮಹಾಲೇಖಪಾಲಕರು, ಕರ್ನಾಟಕ, ಬೆಂಗಳೂರು.
2) ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು.
4) ಪ್ರಾದೇಶಿಕ ಆಯುಕ್ತರು, ಬೆಂಗಳೂರು / ಮೈಸೂರು / ಬೆಳಗಾಂ / ಗುಲ್ಬರ್ಗಾ ವಿಭಾಗಗಳು.
5) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
6) ಎಲ್ಲಾ ಜಿಲ್ಲಾಧಿಕಾರಿಗಳು. [ಧಾರ್ಮಿಕ ದತ್ತಿ ಆಯುಕ್ತರ ಮೂಲಕ]
7) ಮಾನ್ಯ ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕೆ, ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
8) ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು.
9) ನಿರ್ದೇಶಕರು, ಖಜಾನೆ ನಿರ್ದೇಶನಾಲಯ, ಬೆಂಗಳೂರು.
10) ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿ.



| | | | | |
|---|---|---|---|---|
| 326 | Thalaku | Renukapura | Renukapura | 337 |
| 327 | Thalaku | Rudrammanahalli | Hirehalli | 138 |
| 328 | Thalaku | Thalaku | Thalaku | 452 |
| 329 | Thalaku | Thalaku LambaniHatti | Thalaku | 81 |
| 330 | Thalaku | Thappagondanahalli | Thappagondanahalli | 198 |
| 331 | Thalaku | Thimmannanahalli | Thimmannanahalli | 333 |
| 332 | Thalaku | Thippareddihalli | Thippareddihalli | 221 |
| 333 | Thalaku | Ullarthy Kaval | Ullarthy Kaval | 226 |
| 334 | Thalaku | valase | valase | 196 |
| 335 | Thalaku | yadalagatte | yadalagatte | 187 |

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 237 |
| ಸದಸ್ಯರ ಹೆಸರು | ಶ್ರೀ ವೆಂಕಟ್‌ರಾವ್ ನಾಡಗೌಡ (ಸಿಂಧನೂರು) |
| ಉತ್ತರಿಸುವ ದಿನಾಂಕ | 12.09.2022 |
| ಉತ್ತರಿಸುವ ಸಚಿವರು: | ಲೋಕೋಪಯೋಗಿ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಕಳ್ಳಿಪಾಳ್ಯ ಗ್ರಾಮದ ಎನ್.ಹೆಚ್-206 ರಿಂದ ಅಡಗೂರು-ಪ್ರಭುವನ ಹಳ್ಳಿ ಮಾರ್ಗವಾಗಿ ಜಿ.ಹೊಸಹಳ್ಳಿ ಕ್ರಾಸ್ ಸೇರುವ ರಸ್ತೆಯನ್ನು ಅಗಲೀಕರಣ ಮಾಡುವುದಕ್ಕೆ ಸರ್ಕಾರದ ಆದೇಶ ಹೊರಡಿಸಲಾಗಿದೆಯೇ: | ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಕಳ್ಳಿಪಾಳ್ಯ ಗ್ರಾಮದ ಎನ್.ಹೆಚ್-206 ರಿಂದ ಅಡಗೂರು-ಪ್ರಭುವನಹಳ್ಳಿ ಮಾರ್ಗವಾಗಿ ಜಿ.ಹೊಸಹಳ್ಳಿಕ್ರಾಸ್ ಸೇರುವ ರಸ್ತೆಯನ್ನು ಸರ್ಕಾರದ ಆದೇಶ ಸಂಖ್ಯೆ: ಲೋಇ 468 ಸಿಆರ್‌ಎಂ 2007 ದಿನಾಂಕ:04/10/2007 ರಲ್ಲಿ ಗ್ರಾಮೀಣ ರಸ್ತೆಯಿಂದ ಜಿಲ್ಲಾ ಮುಖ್ಯ ರಸ್ತೆಯಾಗಿ ಮೇಲ್ದರ್ಜೆಗೊಂಡಿದ್ದು ಏಕಪಥ ಅಂದರೆ 3.75 ಮೀಟರ್ ಅಗಲದ ರಸ್ತೆಯಾಗಿಯಾಗಿರುತ್ತದೆ. ಈ ರಸ್ತೆಯ ಅಭಿವೃದ್ಧಿ ಹಾಗೂ ನಿರ್ವಹಣೆ ಕಾಮಗಾರಿಯನ್ನು ಕೈಗೊಳ್ಳಲಾಗುತ್ತಿದೆ.<br><br>ಪ್ರಸ್ತುತ ಸಾಲಿನಲ್ಲಿ ರಸ್ತೆ ಅಗಲೀಕರಣದ ಬಗ್ಗೆ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಆ | ಸರ್ಕಾರವು ರಸ್ತೆ ಅಗಲೀಕರಣ ಮಾಡುವುದಕ್ಕೆ ಚಿಂತನೆ ನೆಡೆಸಿದೆಯೇ:(ಸಂಪೂರ್ಣ ಮಾಹಿತಿಯನ್ನು ನೀಡುವುದು) | |
| ಇ | ರಸ್ತೆ ಅಗಲೀಕರಣ ಮಾಡುವುದಕ್ಕೆ ರೈತರಿಂದ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಆದೇಶ ಹೊರಡಿಸಲಾಗಿದೆಯೇ?( ಮಾಹಿತಿಯನ್ನು ನೀಡುವುದು) | ರಸ್ತೆ ಅಗಲೀಕರಣ ಪ್ರಸ್ತಾವನೆ ಇರುವುದಿಲ್ಲವಾದ್ದರಿಂದ ರೈತರಿಂದ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳುವ ಪ್ರಮೇಯ ಉದ್ಭವಿಸುವುದಿಲ್ಲ. |

ಲೋಇ 82 ಸಿಕ್ಯೂಎನ್ 2022(ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು



# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ವೆಂಕಟರಾವ್ ನಾಡಗೌಡ (ಸಿಂಧನೂರು)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 238

ಉತ್ತರಿಸಬೇಕಾದ ದಿನಾಂಕ : 12.09.2022

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಈ ಹಿಂದೆ ರೈತರ ಮಕ್ಕಳಿಗೆ ಪಶುಭಾಗ್ಯ ಯೋಜನೆಯಡಿ ಹಸು, ಎಮ್ಮೆಗಳನ್ನು ನೀಡಲಾಗುತ್ತಿದ್ದು, ಈ ಉತ್ತಮ ಯೋಜನೆಯನ್ನು ನಿಲ್ಲಿಸಿರುವ ಕಾರಣಗಳೇನು; (ವಿವರ ನೀಡುವುದು) | 2020–21 ನೇ ಸಾಲಿನಿಂದ ಇಲ್ಲಿಯವರೆಗೂ ಆಯವ್ಯಯ ಅಂದಾಜುಗಳಲ್ಲಿ ಪಶುಭಾಗ್ಯ ಯೋಜನೆಗೆ ಅನುದಾನ ನಿಗದಿಯಾಗದ ಕಾರಣ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ಈ ಇಲಾಖೆಯಿಂದ ರೈತರಿಗೆ ನೀಡುತ್ತಿರುವ ಯೋಜನೆಗಳಾವುವು? (ಸಂಪೂರ್ಣ ವಿವರ ನೀಡುವುದು) | ಇಲಾಖೆಯಿಂದ ರೈತರಿಗೆ ಒದಗಿಸಲಾಗುತ್ತಿರುವ ಯೋಜನೆಗಳ ವಿವರಗಳನ್ನು **ಅನುಬಂಧ**ದಲ್ಲಿ ನೀಡಲಾಗಿದೆ.<br><br>2021–22 ನೇ ಸಾಲಿನಲ್ಲಿ ಪಶುಭಾಗ್ಯ ಯೋಜನೆಗೆ ಬದಲಾಗಿ ಆರ್.ಕೆ.ವಿ.ವೈ. ಯೋಜನೆಯಡಿಯಲ್ಲಿ ಮುಖ್ಯ ಮಂತ್ರಿಗಳ ಅಮೃತ ಜೀವನ ಯೋಜನೆ ಕಾರ್ಯಕ್ರಮದಡಿಯಲ್ಲಿ ರೂ.4.00 ಕೋಟಿ ಅನುದಾನದಲ್ಲಿ 2385 ಫಲಾನುಭವಿಗಳಿಗೆ ಒಂದು ಮಿಶ್ರತಳಿ ಹಾಲು ಕರೆಯುವ ಹಸು ವಿತರಣೆ ಮಾಡಲು ಕ್ರಮ ವಹಿಸಲಾಗಿದೆ.<br><br>ಒಂದು ಹೈನು ಘಟಕದ ವೆಚ್ಚ ರೂ. 62000/– ಪರಿಶಿಷ್ಟ ಜಾತಿ/ಪಂಗಡ–ಸಹಾಯಧನ ಶೇ. 33.33 (ರೂ.20665/–)<br>ಸಾಮಾನ್ಯ ವರ್ಗ –ಸಹಾಯಧನ ಶೇ. 25 (ರೂ. 15500/–) |

ಇ– ಪಸಂಮೀ 176 ಸಲೆವಿ 2022

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 238 ಕ್ಕೆ ಅನುಬಂಧ

## ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ರೈತರಿಗೆ ನೀಡುತ್ತಿರುವ ಯೋಜನೆಗಳ ವಿವರ

<table>
<tr><th>ಕ್ರ ಸಂ</th><th>ಕಾರ್ಯಕ್ರಮ</th><th>ವಿವರ</th></tr>
<tr><td>1</td><td>ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರ ಅನ್ವಯ ಬಳಕೆಯಾಗದ ಮೊತ್ತ</td><td>ಪರಿಶಿಷ್ಟ ಜಾತಿ & ಪಂಗಡದ ಫಲಾನುಭವಿಗಳಿಗೆ ಶೇಕಡ 90% ಸಹಾಯಧನದಲ್ಲಿ ಹಸುಗಳ ರಬ್ಬರ್ ಮ್ಯಾಟ್ ವಿತರಿಸಲಾಗುವುದು ಈ ಯೋಜನೆಗೆ ವಿಶೇಷ ಘಟಕ ಯೋಜನೆಯಲ್ಲಿ 22.38ಲಕ್ಷ ಹಾಗೂ ಗಿರಿಜನ ಉಪಯೋಜನೆಯಲ್ಲಿ ರೂ51.64ಲಕ್ಷ ಅನುದಾನ ನಿಗದಿಪಡಿಸಲಾಗಿದೆ.<br><table><tr><th>ಘಟಕದ ವಿವರ</th><th>ಘಟಕದ ವೆಚ್ಚ</th><th>ಸಹಾಯಧನ</th><th>ಫಲಾನುಭವಿ ವಂತಿಕೆ</th></tr><tr><td>ಎರಡು ರಬ್ಬರ್ ನೆಲಹಾಸು</td><td>ರೂ.6190/-</td><td>ರೂ.5571/-</td><td>ರೂ.619/-</td></tr></table></td></tr>
<tr><td>2</td><td>ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ</td><td>• ನಿಗಮದಲ್ಲಿ ನೊಂದಣಿಯಾಗಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಪರಿಶಿಷ್ಟ ಪಂಗಡದ/ ಪರಿಶಿಷ್ಟ ಜಾತಿ (6+1) ರ ಕುರಿ/ ಮೇಕೆ ಘಟಕಗಳನ್ನು ಪ್ರತಿ ಘಟಕಕ್ಕೆ ರೂ.45000/- ಗಳ ವೆಚ್ಚದಲ್ಲಿ ಪೂರೈಸಲಾಗುವುದು. ಈ ಘಟಕದ ವೆಚ್ಚದಲ್ಲಿ ಶೇಕಡ 90 ರಷ್ಟು ರೂ.40500.00 ಗಳನ್ನು ನಿಗಮದ ವತಿಯಿಂದ ಸಹಾಯಧನವಾಗಿ ನೀಡಲಾಗುವುದು. ಉಳಿಕೆ ಮೊತ್ತ ರೂ.4500.00 ಗಳನ್ನು ಫಲಾನುಭವಿ ವಂತಿಕೆ ಅಥವಾ ಸಾಲದ ರೂಪದಲ್ಲಿ ರಾಷ್ಟ್ರೀಕೃತ, ಗ್ರಾಮೀಣ, ಸ್ಥಳೀಯ ಸಹಕಾರಿ ಬ್ಯಾಂಕುಗಳ ವತಿಯಿಂದ ಒದಗಿಸಲಾಗುವುದು. ವಲಸೆ ಕುರಿಗಾರರಿಗೆ ಸಂಚಾರಿ ಟೆಂಟ್, ಸೋಲಾರ್ ಟಾರ್ಚ್, ರಬ್ಬರ್ ಫ್ಲೋರ್ ಮ್ಯಾಟ್ ಮತ್ತು ರೇನ್ ಕೋಟ್ ಸೇರಿದಂತೆ ಪರಿಕರಗಳ ಕಿಟ್‌ಗಳ ವಿತರಣೆ<br>• ಆರ್ಥಿಕವಾಗಿ ಹಿಂದುಳಿದ ಕುರಿಗಾರರಿಗೆ ವಸತಿ ಸೌಕರ್ಯದ ಜೊತೆಗೆ ಕುರಿ ದೊಡ್ಡಿ ನಿರ್ಮಿಸಲು ಐದು ಲಕ್ಷ ರೂ. ಸಹಾಯಧನ ನೀಡಲಾಗುವುದು.<br>• ವಲಸೆ ಕುರಿಗಾರರು ಆಕಸ್ಮಿಕ ಮರಣ ಹೊಂದಿದಲ್ಲಿ ಅವಲಂಬಿತ ಕುಟುಂಬದವರನ್ನು ಆರ್ಥಿಕ ಸಂಕಷ್ಟದಿಂದ ಪಾರು ಮಾಡಲು ಕುರಿಗಾಹಿಗಳಿಗೆ ಐದು ಲಕ್ಷ ರೂ. ವಿಮಾ ಸೌಲಭ್ಯ ಒದಗಿಸಲಾಗುವುದು.<br>• ಕುರಿ ಮತ್ತು ಮೇಕೆಗಳ ಆಕಸ್ಮಿಕ ಸಾವಿಗೆ ಕುರಿ ಮಾಲೀಕರಿಗೆ ಅನುಗ್ರಹ ಕೊಡುಗೆ: ಪ್ರಕೃತಿ ವಿಕೋಪ ಪರಿಹಾರ ವ್ಯಾಪ್ತಿಯಲ್ಲಿ ಬರುವ ಹಾಗೂ ವಿಮೆ ಮಾಡಿಸಿದ ಪ್ರಕರಣಗಳನ್ನು ಹೊರತುಪಡಿಸಿ ಇನ್ನುಳಿದ ಸಂದರ್ಭಗಳಲ್ಲಿ 6 ತಿಂಗಳು ಮೇಲ್ಪಟ್ಟ ಕುರಿ ಮತ್ತು ಮೇಕೆ ಆಕಸ್ಮಿಕ ಅಥವಾ ದೃಢೀಕೃತ ಸಾಂಕ್ರಾಮಿಕ ರೋಗಗಳಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ಕುರಿ /ಮೇಕೆ ಗೆ ರೂ.5,000/- ಪರಿಹಾರ ಧನ ಹಾಗೂ 3-6 ತಿಂಗಳ ವಯಸ್ಸಿನ ಕುರಿ/ ಮೇಕೆಗಳಿಗೆ ರೂ.3,500/- ಪರಿಹಾರ ಧನವನ್ನು ನೀಡಲಾಗುವುದು.</td></tr>
<tr><td>3</td><td>ಲಸಿಕಾ ಕಾರ್ಯಕ್ರಮ</td><td>• ಗುರುತಿಸಲ್ಪಟ್ಟ ಸಾಂಕ್ರಾಮಿಕ ರೋಗಗಳ ವಿರುದ್ಧ ಲಸಿಕೆ ಹಾಕುವುದು.<br>• ಕಾಲುಬಾಯಿಜ್ವರ ಮತ್ತು ಕಂದುರೋಗಗಳ ವಿರುದ್ಧ ಲಸಿಕಾ ಕಾರ್ಯಕ್ರಮಕ್ಕೆ ಶೇ. 100 ಕೇಂದ್ರದ ಅನುದಾನ<br>• ಆಸ್ಕಾಡ್ ಯೋಜನೆಯಡಿಯಲ್ಲಿ ಶೇ. 60 ಕೇಂದ್ರದ ಪಾಲು ಹಾಗೂ ಶೇ. 40 ರಾಜ್ಯದ ಪಾಲು ಅನುಪಾತದಲ್ಲಿ ಅನುದಾನ (ಗಳಲೇರೋಗ, ಚಪ್ಪೆರೋಗ, ಕರುಳುಬೇನೆ, ನೆರಡಿರೋಗಗಳ ವಿರುದ್ಧ ಲಸಿಕೆ ಹಾಕುವುದು)<br>ಪಿ.ಪಿ.ಆರ್ ರೋಗದ ವಿರುದ್ಧ ಲಸಿಕಾ ಕಾರ್ಯಕ್ರಮಕ್ಕೆ ಶೇ. 60 ಕೇಂದ್ರದ ಪಾಲು ಹಾಗೂ ಶೇ. 40 ರಾಜ್ಯದ ಪಾಲು ಅನುಪಾತದಲ್ಲಿ ಅನುದಾನ</td></tr>
</table>

| | | |
|---|---|---|
| 4 | ಹಾಲು ಉತ್ಪಾದಕರಿಗೆ ಉತ್ತೇಜನ: | • ಹಾಲು ಉತ್ಪಾದನೆಗೆ ಉತ್ತೇಜನ ನೀಡಲು ಕರ್ನಾಟಕ ಹಾಲು ಮಹಾ ಮಂಡಳಿಗೆ ಹಾಲು ಸರಬರಾಜು ಮಾಡುವ ಸದಸ್ಯರಿಗೆ ಪ್ರತಿ ಲೀಟರ್ ಗೆ ರೂ. 5/- ರಂತೆ ಪ್ರೋತ್ಸಾಹಧನ ನೀಡಲಾಗುವುದು. |
| 5 | ಜಾನುವಾರುಗಳ ಆರೋಗ್ಯ ಶಿಬಿರ | • ಉಚಿತ ಜಾನುವಾರು ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸುವ ಮೂಲಕ ಜಾನುವಾರುಗಳ ಆರೋಗ್ಯ ತಪಾಸಣೆ ಮಾಡಲಾಗುತ್ತಿದೆ. |
| 6 | ನಾಟಿ ಕೋಳಿಮರಿ ವಿತರಣೆ | • 5 ಲಕ್ಷ ಕೋಳಿಮರಿಗಳನ್ನು ಉತ್ಪಾದಿಸಿ ರೈತ ಮಹಿಳೆಯರಿಗೆ ತಲಾ 20 ನಾಟಿಕೋಳಿಮರಿ (5 ವಾರದ ಕೋಳಿಮರಿಗಳು) ವಿತರಿಸಲಾಗುವುದು. |
| 7 | ಪ್ರಾಣಿ ಕಲ್ಯಾಣ ಸಹಾಯವಾಣಿ | • ಜಾನುವಾರುಗಳಿಗೆ 24/7 ನಿರಂತರ ಸೇವೆಯನ್ನು ಒದಗಿಸಲು ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ರೈತರು ಸಹಾಯವಾಣಿಯನ್ನು ಪ್ರಾರಂಭಿಸಲಾಗಿದ್ದು ಸಹಾಯವಾಣಿ ಸಂಖ್ಯೆ: 8277100200 ಮೂಲಕ ಸಂಪರ್ಕಿಸಿ ಇಲಾಖೆಯ ತಾಂತ್ರಿಕ ಸೇವೆಯನ್ನು ಪಡೆಯಬಹುದಾಗಿದೆ. |
| | **ಕೇಂದ್ರ ಪುರಸ್ಕೃತ ಯೋಜನೆ** | |
| 8 | ರಾಷ್ಟ್ರೀಯ ಜಾನುವಾರು ಮಿಷನ್ | • ವಿಪತ್ತು ನಿರ್ವಹಣೆ-ಜಾನುವಾರು ವಿಮಾ ಯೋಜನೆ<br>• ಕಾರ್ಯಕ್ರಮದಡಿ ಜಾನುವಾರುಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ. ಫಲಾನುಭವಿಗಳ ಬೆಲೆಯುಳ್ಳ ಹೈನುಗಾರಿಕೆಗೆ ಯೋಗ್ಯವಾದ ಒಂದು ವರ್ಷ ಮೇಲ್ಪಟ್ಟ ಮತ್ತು ವಿಮೆಗೊಳಪಡಿಸುವ ಸಮಯದಲ್ಲಿ ಗರಿಷ್ಠ ವಯಸ್ಸು 8 ವರ್ಷಗಳಿಗೆ ಮೀರದಂತಹ ಮಣಕ /ಆಕಳು / ಎಮ್ಮೆಗಳನ್ನು ಒಂದು ವರ್ಷದ/ ಮೂರು ವರ್ಷದ ಅವಧಿಗೆ ಮಾರುಕಟ್ಟೆ ಮೌಲ್ಯದ ಶೇಕಡ 2%/6% ಪ್ರೀಮಿಯಂ ದರದಲ್ಲಿ ಗರಿಷ್ಠ ರೂ. 70 ಸಾವಿರ ಮೂಲ ಬೆಲೆಯವರೆಗೆ ಕೆಳಕಂಡ ಪ್ರೀಮಿಯಂ ಸಹಾಯಧನದ ದರದಂತೆ ವಿಮೆ ಸೌಲಭ್ಯ ಒದಗಿಸುವುದು.<br><br>ಫಲಾನುಭವಿಯ ವರ್ಗ \| ಸಹಾಯಧನ \| ಫಲಾನುಭವಿಯ ವಂತಿಗೆ<br>ಬಿಪಿಎಲ್ /ಎಸ್.ಸಿ.ಪಿ/ಟಿ.ಎಸ್.ಪಿ./ ಫಲಾನುಭವಿಗಳು \| 70% \| 30%<br>ಎಪಿಎಲ್ \| 50% \| 50% |
| 9 | ಕಿಸಾನ್ ಕ್ರೆಡಿಟ್ ಕಾರ್ಡ್: | • ಕಿಸಾನ್ ಕ್ರೆಡಿಟ್ ಕಾರ್ಡ್ ಯೋಜನೆಯಡಿ ಬಡ್ಡಿ ರಿಯಾಯಿತಿ ಸೌಲಭ್ಯವು ರೂ.3 ಲಕ್ಷಗಳವರೆಗೆ ದೊರೆಯಬಹುದಾಗಿದ್ದು, ಪ್ರತಿ ರೈತರಿಗೆ ರೂ.1.60 ಲಕ್ಷ ಸಾಲ ಸೌಲಭ್ಯವನ್ನು ಯಾವುದೇ ಭದ್ರತೆಯಿಲ್ಲದೆ ಪಡೆಯುವ ಅವಕಾಶವಿರುತ್ತದೆ.<br>• ಕಿಸಾನ್ ಕ್ರೆಡಿಟ್ ಕಾರ್ಡ್‌ನಿಂದ ಪಡೆಯುವ ಸಾಲಕ್ಕೆ ಶೇ.2 ರಷ್ಟು ಬಡ್ಡಿ ಸಹಾಯಧನ ನೀಡುತ್ತಿದ್ದು, ಈ ಸಾಲವನ್ನು ಸಕಾಲದಲ್ಲಿ ಮರುಪಾವತಿ ಮಾಡಿದಲ್ಲಿ ಹೆಚ್ಚುವರಿಯಾಗಿ ವಾರ್ಷಿಕ ಶೇ. 3 ರಷ್ಟು ಬಡ್ಡಿ ಸಹಾಯಧನದ ಸೌಲಭ್ಯವನ್ನು ಸಹಾ ಪಡೆಯಬಹುದಾಗಿದೆ. |

<table>
<tr><td>10</td><td>NLM EDP ಉದ್ಯಮ ಶೀಲ ಕಾರ್ಯಕ್ರಮ:</td><td>
<table>
<tr><th>ಕ್ರ ಸಂ</th><th>ಉದ್ಯಮಿ ಘಟಕಗಳು</th><th>ಘಟಕ</th><th>ಶೇ. ಸಹಾಯಧನ</th><th>ಗರಿಷ್ಠ ಸಹಾಯಧನ</th></tr>
<tr><td>1</td><td>ಗ್ರಾಮೀಣ ಕೋಳಿ ಸಾಕಾಣಿಕೆ ಘಟಕ</td><td>1000+100</td><td>50%</td><td>25 ಲಕ್ಷ</td></tr>
<tr><td>2</td><td>ಕುರಿ /ಮೇಕೆ ತಳಿ ಸಂವರ್ಧನಾ ಉದ್ಯಮಿ ಘಟಕ</td><td>500+25</td><td>50%</td><td>50 ಲಕ್ಷ</td></tr>
<tr><td>3</td><td>ಹಂದಿ ತಳಿ ಸಂವರ್ಧನಾ ಉದ್ಯಮಿ ಘಟಕ :</td><td>100+10</td><td>50%</td><td>30 ಲಕ್ಷ</td></tr>
<tr><td>4</td><td>ಮೇವು ಬಿಲ್ಲೆ/ ರಸಮೇವು ಉದ್ಯಮಿ ಘಟಕ</td><td></td><td>50%</td><td>50 ಲಕ್ಷ</td></tr>
</table>
</td></tr>
<tr><td>11</td><td>ಪಶು ಸಂಜೀವಿನಿ (ಸಂಚಾರಿ ಪಶು ಶಸ್ತ್ರಚಿಕಿತ್ಸಾ ವಾಹನ)</td><td>ಜಾನುವಾರು ಆರೋಗ್ಯ ಮತ್ತು ರೋಗ ನಿಯಂತ್ರಣ ಕಾರ್ಯಕ್ರಮದ ಅಡಿಯಲ್ಲಿ ರೈತರ ಮನೆಬಾಗಿಲಿಗೆ ತುರ್ತು ಅಗತ್ಯ ಪಶುವೈದ್ಯಕೀಯ ಸೇವೆಗಳನ್ನು ಒದಗಿಸಲು 290 ಸುಸಜ್ಜಿತ ಸಂಚಾರಿ ಪಶುಚಿಕಿತ್ಸಾ ವಾಹನಗಳನ್ನು ಒದಗಿಸಿದೆ.</td></tr>
</table>

**ಕರ್ನಾಟಕ ವಿಧಾನ ಸಭೆ**

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ | : | 239 |
| 2 | ಸದಸ್ಯರ ಹೆಸರು | : | ಶ್ರೀ ವೆಂಕಟ್ ರಾವ್ ನಾಡಗೌಡ(ಸಿಂಧನೂರು) |
| 3 | ಉತ್ತರಿಸಬೇಕಾದ ದಿನಾಂಕ | : | 12/09/2022 |
| 4 | ಉತ್ತರಿಸುವ ಸಚಿವರು | : | ಮಾನ್ಯ ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ನಗರದಲ್ಲಿ ವಿಮಾನ ನಿಲ್ದಾಣ ಸ್ಥಾಪನೆಗೆ ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಯಿಂದ ಹಣ ಒದಗಿಸಲಾಗಿರುವುದು ನಿಜವೇ; | ಹೌದು |
| ಆ) | 2021-22ನೇ ಸಾಲಿನ ಆಯವ್ಯಯದಲ್ಲಿ ವಿಮಾನ ನಿಲ್ದಾಣವನ್ನು ಪ್ರಾರಂಭಿಸುವುದಾಗಿ ಘೋಷಿಸಿದ್ದರೂ ಸಹ ಇನ್ನೂ ಪ್ರಾರಂಭಿಸದಿರಲು ಕಾರಣಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | 2022-23ನೇ ಸಾಲಿನ ಆಯವ್ಯಯ ಘೋಷಣೆಯನ್ವಯ ರಾಯಚೂರು ಜಿಲ್ಲೆಯಲ್ಲಿ ಗ್ರೀನ್‌ಫೀಲ್ಡ್ ದೇಶೀಯ ಪ್ರಯಾಣಿಕ ವಿಮಾನ ನಿಲ್ದಾಣದ ಅಭಿವೃದ್ಧಿಯನ್ನು ರಾಜ್ಯ ಸರ್ಕಾರ ಮತ್ತು ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಹಾಗೂ ಜಿಲ್ಲಾ ಖನಿಜಾ ಪ್ರತಿಷ್ಠಾನ ನಿಧಿಯಿಂದ ರೂ.185.57 ಕೋಟಿ ಅಂದಾಜು ವೆಚ್ಚದಲ್ಲಿ ಅಭಿವೃದ್ಧಿಪಡಿಸಲು ಸರ್ಕಾರದ ಆದೇಶ ಸಂಖ್ಯೆ: ಮೂಅಇ 133 ರಾಅವಿ 2020, ದಿನಾಂಕ: 07.04.2022 ರಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ. ಆದರೆ, ಭೂಸ್ವಾಧೀನ ಹಾಗೂ ಪುನರ್ವಸತಿ ಮತ್ತು ಇನ್ನಿತರ ಕಾಮಗಾರಿಗಳು ಸೇರಿದಂತೆ ಹೆಚ್ಚುವರಿ ರೂ.33.00 ಕೋಟಿಗಳೊಂದಿಗೆ ಪರಿಷ್ಕೃತ ಅಂದಾಜು ಮೊತ್ತ ರೂ 219.00 ಕೋಟಿಗಳಿಗೆ ಆಡಳಿತಾತ್ಮಕ ಅನುಮೋದನೆ ಪಡೆಯಲು ಪರಿಶೀಲನೆಯಲ್ಲಿರುತ್ತದೆ. |
| ಇ) | ಹಾಗಿದ್ದಲ್ಲಿ, ಸರ್ಕಾರದಿಂದ ಇದಕ್ಕಾಗಿ ಎಷ್ಟು ಹಣ ಕಾಯ್ದಿರಿಸಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | ರಾಯಚೂರು ಗ್ರೀನ್‌ಫೀಲ್ಡ್ ದೇಶೀಯ ಪ್ರಯಾಣಿಕ ವಿಮಾನ ನಿಲ್ದಾಣದ ಅಭಿವೃದ್ಧಿಯನ್ನು ರೂ.185.57 ಕೋಟಿ ವೆಚ್ಚದಲ್ಲಿ ಅಭಿವೃದ್ಧಿಪಡಿಸಲು ಅನುಮೋದನೆಯನ್ನು ನೀಡಲಾಗಿರುತ್ತದೆ. |

ಸಂಖ್ಯೆ:ಮೂಅಇ 138 ರಾಅವಿ 2022

**(ವಿ.ಸೋಮಣ್ಣ)**
ವಸತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ,
ಸಚಿವರು

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 24

2) ಸದಸ್ಯರ ಹೆಸರು : ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)

3) ಉತ್ತರಿಸಬೇಕಾದ ದಿನಾಂಕ : 12-09-2022

4) ಉತ್ತರಿಸಬೇಕಾದ ಸಚಿವರು : ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಮತ್ಸ್ಯಾಶ್ರಯ ಯೋಜನೆಯಡಿ ನಿರ್ವಸಿತ ಮೀನುಗಾರರ ಎಷ್ಟು ಫಲಾನುಭವಿಗಳಿಗೆ ಮನೆಗಳನ್ನು ನೀಡಲಾಗಿರುತ್ತದೆ; (ಕೋಲಾರ ಜಿಲ್ಲೆಯ ತಾಲ್ಲೂಕುವಾರು ಮಾಹಿತಿಯನ್ನು ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಮತ್ಸ್ಯಾಶ್ರಯ ಯೋಜನೆಯಡಿ ಮೀನುಗಾರಿಕೆ ಇಲಾಖೆಗೆ ಯಾವುದೇ ಮನೆಗಳು ಮಂಜೂರಾಗಿರುವುದಿಲ್ಲ. |
| ಆ) | ಬಂಗಾರಪೇಟೆ ತಾಲ್ಲೂಕಿನ ಎಷ್ಟು ಕೆರೆಗಳಲ್ಲಿ ಮೀನು ಸಾಕಾಣಿಕೆ ಮಾಡಲಾಗುತ್ತಿದೆ; ಈ ಪೈಕಿ ಎಷ್ಟು ಕೆರೆಗಳನ್ನು ಗುತ್ತಿಗೆಗೆ ನೀಡಲಾಗಿದೆ; | ಬಂಗಾರಪೇಟೆ ತಾಲ್ಲೂಕಿನಲ್ಲಿ ಇಲಾಖಾ ವ್ಯಾಪ್ತಿಯ 04 ಕೆರೆಗಳಿದ್ದು, ನಾಲ್ಕೂ ಕೆರೆಗಳಲ್ಲಿ ಮೀನು ಸಾಕಾಣಿಕೆ ಮಾಡಲಾಗುತ್ತಿದೆ. ಈ ಪೈಕಿ 03 ಕೆರೆಗಳನ್ನು ಮೀನುಗಾರರ ಸಹಕಾರ ಸಂಘಗಳಿಗೆ ಗುತ್ತಿಗೆಗೆ ನೀಡಲಾಗಿದೆ. ಒಂದು ಕೆರೆಯನ್ನು ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಲಾಗಿದೆ. |
| ಇ) | ಮೀನುಗಾರಿಕೆಗೆ ಸಂಬಂಧಿಸಿದಂತೆ ಎಷ್ಟು ಸಂಘಗಳಿರುತ್ತವೆ? (ಆ ಸಂಘಗಳ ಅಧ್ಯಕ್ಷರು, ಪದಾಧಿಕಾರಿಗಳು ಹಾಗೂ ಸಂಘಗಳ ಹೆಸರುಗಳನ್ನು ನೀಡುವುದು) | ಕೋಲಾರ ಜಿಲ್ಲೆಯಲ್ಲಿ ಮೀನುಗಾರಿಕೆಗೆ ಸಂಬಂಧಿಸಿದಂತೆ 11 ಮೀನುಗಾರರ ಸಹಕಾರ ಸಂಘಗಳಿರುತ್ತವೆ. ಸದರಿ ಸಂಘಗಳ ಅಧ್ಯಕ್ಷರು, ಪದಾಧಿಕಾರಿಗಳು ಹಾಗೂ ಸಂಘಗಳ ಹೆಸರು ಗಳನ್ನು **ಅನುಬಂಧ-1 ಮತ್ತು ಅನುಬಂಧ-2** ರಲ್ಲಿ ನೀಡಲಾಗಿದೆ. |

ಸಂಖ್ಯೆ: ಪಸಂಮೀ ಇ-181 ಮೀಇಯೋ 2022

(ಎಸ್. ಅಂಗಾರ)
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

ಅನುಬಂಧ-1(LAQ-24)

ಮೀನುಗಾರಿಕೆ ಸಹಕಾರ ಸಂಘಗಳ ಅಧ್ಯಕ್ಷರು ಮತ್ತು ಪದಾಧಿಕಾರಿಗಳ ವಿವರ

| 1. ತಾಲ್ಲೂಕು ಮೀನುಗಾರರ ಸಹಕಾರ ಸಂಘ(ನಿ), ಕುರುಬರಪೇಟೆ, ಕೋಲಾರ ಟೌನ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ. | | |
|---|---|---|
| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
| ಸದರಿ ಸಂಘದ ಕಾರ್ಯಕಾರಿ ಸಮಿತಿಯಿಲ್ಲದಿರುವುದರಿಂದ ಆಡಳಿತ ಅಧಿಕಾರಿಯನ್ನು ನೇಮಿಸಲಾಗಿರುತ್ತದೆ. | | |
| 2. ಶ್ರೀ ಸಫಲಮ್ಮದೇವಿ, ಮೀನುಗಾರರ ಸಹಕಾರ ಸಂಘ (ನಿ), ಟೇಕಲ್ ರೋಡ್, ಜಯನಗರ 'ಬಿ' ಬ್ಲಾಕ್, ಕೋಲಾರ ಟೌನ್, ಕೋಲಾರ. | | |
| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
| 1 | ಶ್ರೀ ಎಸ್.ಆರ್ ಮುರಳಿಗೌಡ | ಅಧ್ಯಕ್ಷರು |
| 2 | ಶ್ರೀ ಶಿವ ಪ್ರದೀಪ್ | ನಿರ್ದೇಶಕರು |
| 3 | ಶ್ರೀ ಕೆ. ಸಂತೋಷ್ | ನಿರ್ದೇಶಕರು |
| 4 | ಶ್ರೀ ಎಸ್.ಆರ್ ಚಂದ್ರಕಾಂತ್ | ನಿರ್ದೇಶಕರು |
| 5 | ಶ್ರೀ ಪಿ.ಎಸ್ ಸತ್ಯನಾರಾಯಣರಾವ್ | ನಿರ್ದೇಶಕರು |
| 6 | ಶ್ರೀ ಎನ್.ಎಸ್ ಮನೋಹರ್ | ನಿರ್ದೇಶಕರು |
| 7 | ಶ್ರೀ ಆರ್ ಜಗನಾಥ್ | ನಿರ್ದೇಶಕರು |
| 8 | ಶ್ರೀ ಪುನೀತ್ ಕುಮಾರ್ ಡಿ.ಜಿ | ನಿರ್ದೇಶಕರು |
| 9 | ಶ್ರೀ ಎಸ್ ರೇಣು ಪ್ರಸಾದ್ | ನಿರ್ದೇಶಕರು |
| 10 | ಶ್ರೀ ಎಸ್ ಸತೀಶ್ | ನಿರ್ದೇಶಕರು |
| 11 | ಶ್ರೀಮತಿ ಸುಶೀಲ | ನಿರ್ದೇಶಕರು |
| 12 | ಶ್ರೀಮತಿ ಕೆ.ಎಸ್ ಶಿಲ್ಪ | ನಿರ್ದೇಶಕರು |
| 3. ಶ್ರೀ ಗಂಗೆ ಮೀನುಗಾರರ ಸಹಕಾರ ಸಂಘ (ನಿ), ಅರಳೀಮರದಹೊಸಹಳ್ಳಿ, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ. | | |
| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
| 1 | ಶ್ರೀ ಎಚ್.ಎನ್ ಶಿವರಾಜ್ ಕುಮಾರ್ | ಅಧ್ಯಕ್ಷರು |
| 2 | ಶ್ರೀ ಗಂಗಾಧರ ಎ | ನಿರ್ದೇಶಕರು |
| 3 | ಶ್ರೀ ಅಮರನಾಥ ಕೆ | ನಿರ್ದೇಶಕರು |
| 4 | ಶ್ರೀ ಗೋಪಾಲ್ | ನಿರ್ದೇಶಕರು |
| 5 | ಶ್ರೀಮತಿ ಪದ್ಮಾವತಿ ಎಂ | ನಿರ್ದೇಶಕರು |
| 6 | ಶ್ರೀ ನಾಗರಾಜು ಡಿ.ಎನ್ | ನಿರ್ದೇಶಕರು |
| 7 | ಶ್ರೀ ಮುರಳಿ | ನಿರ್ದೇಶಕರು |
| 8 | ಶ್ರೀ ಪ್ರಸಾದ್ ಜಿ | ನಿರ್ದೇಶಕರು |
| 9 | ಶ್ರೀ ಯಲ್ಲಪ್ಪ ಎಂ.ವಿ | ನಿರ್ದೇಶಕರು |
| 10 | ಶ್ರೀ ಲೋಕೇಶ್ ಕೆ | ನಿರ್ದೇಶಕರು |
| 11 | ಶ್ರೀಮತಿ ಪೂಜಿತ | ನಿರ್ದೇಶಕರು |
| 12 | ಶ್ರೀಮತಿ ನೇತ್ರಾವತಿ | ನಿರ್ದೇಶಕರು |
| 4. ಸೋಮಾಂಬುಧಿ ಎಸ್ ಅಗ್ರಹಾರ ಅಮಾನಿಕೆರೆ ಮೀನು ಸಾಕಾಣಿಕೆದಾರರ ಸಹಕಾರ ಸಂಘ (ನಿ), ಸೋಮಾಂಬುದಿ ಅಗ್ರಹಾರ, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ. | | |

| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
|---|---|---|
| 1 | ಶ್ರೀ ಶಂಕರಪ್ಪ ಆರ್ | ಅಧ್ಯಕ್ಷರು |
| 2 | ಶ್ರೀಮತಿ ಶಿಲ್ಪ ಎಸ್ | ನಿರ್ದೇಶಕರು |
| 3 | ಶ್ರೀ ಮುನಿರಾಜು | ನಿರ್ದೇಶಕರು |
| 4 | ಶ್ರೀ ನಂಜೇಗೌಡ ವಿ | ನಿರ್ದೇಶಕರು |
| 5 | ಶ್ರೀ ವೀರಸ್ವಾಮಿ | ನಿರ್ದೇಶಕರು |
| 6 | ಶ್ರೀ ಭೈರೇಗೌಡ | ನಿರ್ದೇಶಕರು |
| 7 | ಶ್ರೀ ಶಿವಾನಂದ ಡಿ.ಎನ್ | ನಿರ್ದೇಶಕರು |
| 8 | ಶ್ರೀ ಗಂಗರಾಜು ಸಿ | ನಿರ್ದೇಶಕರು |
| 9 | ಶ್ರೀ ಮುನಿಯಪ್ಪ | ನಿರ್ದೇಶಕರು |
| 10 | ಶ್ರೀ ನಾರಾಯಣಸ್ವಾಮಿ | ನಿರ್ದೇಶಕರು |
| 11 | ಶ್ರೀಮತಿ ರಾಜೇಶ್ವರಿ ಎಸ್.ಎನ್ | ನಿರ್ದೇಶಕರು |
| 12 | ಶ್ರೀಮತಿ ಇಂದ್ರಮ್ಮ | ನಿರ್ದೇಶಕರು |

**5. ಶ್ರೀ ಸೋಮೇಶ್ವರ ಸ್ವಾಮಿ ಮೀನು ಉತ್ಪನ್ನ ಮತ್ತು ಮಾರಾಟ ಸಹಕಾರ ಸಂಘ (ನಿ), ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ.**

| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
|---|---|---|
| 1 | ಶ್ರೀ ಮುನಿಸ್ವಾಮಿ | ಅಧ್ಯಕ್ಷರು |
| 2 | ಶ್ರೀ ಅಯ್ಯಪ್ಪ | ಉಪಾಧ್ಯಕ್ಷರು |
| 3 | ಶ್ರೀ ಜೋಟು | ನಿರ್ದೇಶಕರು |
| 4 | ಶ್ರೀ ನಾರಾಯಣಪ್ಪ | ನಿರ್ದೇಶಕರು |
| 5 | ಶ್ರೀ ಎನ್.ವೆಂಕಟಪತಿ | ನಿರ್ದೇಶಕರು |
| 6 | ಶ್ರೀ ಎಂ.ಕುಮಾರ್ | ನಿರ್ದೇಶಕರು |
| 7 | ಶ್ರೀ ಎನ್.ಲಕ್ಷ್ಮಯ್ಯ | ನಿರ್ದೇಶಕರು |
| 8 | ಶ್ರೀ ವಿ.ಮಲಿಕಾರ್ಜುನ | ನಿರ್ದೇಶಕರು |
| 9 | ಶ್ರೀ ಕೆ.ಗೋಪಿ | ನಿರ್ದೇಶಕರು |
| 10 | ಶ್ರೀ ನಾರಾಯಣಸ್ವಾಮಿ | ನಿರ್ದೇಶಕರು |
| 11 | ಶ್ರೀ ವೇದವತಿ | ನಿರ್ದೇಶಕರು |
| 12 | ಮಂಜುನಾಥ | ನಿರ್ದೇಶಕರು |

**6. ತಾಲ್ಲೂಕು ಮೀನುಗಾರರ ಸಹಕಾರ ಸಂಘ(ನಿ), ಬೇತಮಂಗಲ, ಕೆ.ಜಿ.ಎಫ್ ತಾಲ್ಲೂಕು, ಕೋಲಾರ ಜಿಲ್ಲೆ.**

| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
|---|---|---|
| 1 | ಶ್ರೀ ಅ.ಮು.ಲಕ್ಷ್ಮೀನಾರಾಯಣ | ಅಧ್ಯಕ್ಷರು |
| 2 | ಶ್ರೀ ವೆಂಕಟೇಶ್ | ನಿರ್ದೇಶಕರು |
| 3 | ಶ್ರೀ ವೆಂಕಟಮುನಿಯಪ್ಪ | ನಿರ್ದೇಶಕರು |
| 4 | ಶ್ರೀ ವೆಂಕಟಸ್ವಾಮಿ | ನಿರ್ದೇಶಕರು |
| 5 | ಶ್ರಿ ಷಣ್ಮುಗಂ | ನಿರ್ದೇಶಕರು |
| 6 | ಶ್ರೀ ಅಮರನಾರಾಯಣ | ನಿರ್ದೇಶಕರು |
| 7 | ಶ್ರೀ ನಟರಾಜ | ನಿರ್ದೇಶಕರು |

| | | |
|---|---|---|
| 8 | ಶ್ರೀಮತಿ ವೀಣಮ್ಮ | ನಿರ್ದೇಶಕರು |
| 9 | ಶ್ರೀಮತಿ ಬಿ.ವಿ ಯಶೋದಮ್ಮ | ನಿರ್ದೇಶಕರು |

**7. ಮೀನುಗಾರರ ಅಭಿವೃದ್ಧಿ ಮತ್ತು ಮಾರಾಟ ಸಹಕಾರ ಸಂಘ(ನಿ), ಪೋಲೇನಹಳ್ಳಿ, ಬಂಗಾರುಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ.**

| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
|---|---|---|
| 1 | ಶ್ರೀ ಮುರಳಿಧರ.ಕೆ | ಅಧ್ಯಕ್ಷರು |
| 2 | ಶ್ರೀ ವೆಂಕಟೇಶ್ | ನಿರ್ದೇಶಕರು |
| 3 | ಶ್ರೀಮತಿ ಸುಲೋಚನಮ್ಮ | ನಿರ್ದೇಶಕರು |
| 4 | ಶ್ರೀ ಬಿ.ರಾಜಗೋಪಾಲ್ | ನಿರ್ದೇಶಕರು |
| 5 | ಶ್ರೀ ಕೃಷ್ಣಪ್ಪ | ನಿರ್ದೇಶಕರು |
| 6 | ಶ್ರೀ ರಾಮಕೃಷ್ಣಪ್ಪ | ನಿರ್ದೇಶಕರು |
| 7 | ಶ್ರೀ ಎಂ.ಶ್ರೀನಿವಾಸ್ | ನಿರ್ದೇಶಕರು |
| 8 | ಶ್ರೀಮತಿ ಸುಶೀಲಮ್ಮ | ನಿರ್ದೇಶಕರು |
| 9 | ಶ್ರೀ ಕೋದಂಡಪ್ಪ | ನಿರ್ದೇಶಕರು |
| 10 | ಶ್ರೀ ನಾಗರಾಜು | ನಿರ್ದೇಶಕರು |
| 11 | ಶ್ರೀ ಕೃಷ್ಣರಾಜು | ನಿರ್ದೇಶಕರು |

**8. ಪಾಲಾರ್ ಮೀನುಗಾರರ ಅಭಿವೃದ್ಧಿ ಮತ್ತು ಮಾರಾಟ ಸಹಕಾರ ಸಂಘ(ನಿ) ಕಂಗಾಂಡ್ಲಹಳ್ಳಿ, ಕೆ.ಜಿ.ಎಫ್, ತಾಲ್ಲೂಕು, ಕೋಲಾರ ಜಿಲ್ಲೆ.**

| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
|---|---|---|
| **ಸದರಿ ಸಂಘವು ಸಮಾಪನೆಗೊಂಡಿರುತ್ತದೆ** | | |

**9. ತಾಲ್ಲೂಕು ಮೀನುಗಾರರ ಸಹಕಾರ ಸಂಘ (ನಿ), ಶ್ರೀನಿವಾಸಪುರ ಟೌನ್, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ.**

| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
|---|---|---|
| 1 | ಶ್ರೀ ವೈ.ಎನ್ ರಘುನಾಥರೆಡ್ಡಿ | ಅಧ್ಯಕ್ಷರು |
| 2 | ಶ್ರೀಮತಿ ಡಿ.ವಿ ಪಾರ್ವತಮ್ಮ | ಉಪಾಧ್ಯಕ್ಷರು |
| 3 | ಶ್ರೀ ಸಿ.ವಿ ಪ್ರಭಾಕರ | ನಿರ್ದೇಶಕರು |
| 4 | ಶ್ರೀ ಜಿ.ಆರ್ ಅಬ್ದುಲ್ ಹನೀಫ್ | ನಿರ್ದೇಶಕರು |
| 5 | ಶ್ರೀ ಕೆ.ಆರ್ ಅಮರನಾಥರೆಡ್ಡಿ | ನಿರ್ದೇಶಕರು |
| 6 | ಶ್ರೀ ಶ್ರೀರಾಮಪ್ಪ | ನಿರ್ದೇಶಕರು |
| 7 | ಶ್ರೀ ವೆಂಕಟಪ್ಪ | ನಿರ್ದೇಶಕರು |
| 8 | ಶ್ರೀ ಜಿ.ಆರ್ ಸತ್ಯನಾರಾಯಣ | ನಿರ್ದೇಶಕರು |
| 9 | ಶ್ರೀ ವಿ.ಸಿ ವೆಂಕಟರಮಣ | ನಿರ್ದೇಶಕರು |
| 10 | ಶ್ರೀ ಬಿ.ಎಸ್ ವೆಂಕಟಪ್ಪ | ನಿರ್ದೇಶಕರು |
| 11 | ಶ್ರೀ ಕೃಷ್ಣಪ್ಪ | ನಿರ್ದೇಶಕರು |
| 12 | ಶ್ರೀ ವೆಂಕಟರಮಣ | ನಿರ್ದೇಶಕರು |
| 13 | ಶ್ರೀ ಕೆ.ಎನ್ ನಾರಾಯಣಪ್ಪ | ನಿರ್ದೇಶಕರು |
| 14 | ಶ್ರೀ ಆರ್ ವೆಂಕಟರವಣಪ್ಪ | ನಿರ್ದೇಶಕರು |

| 10. ಶ್ರೀ ವನ್ನಮ್ಮ ಚೆನ್ನಮ್ಮ, ಮೀನುಗಾರರ ಸಹಕಾರ ಸಂಘ (ನಿ), ತಿಮ್ಮನಾಯಕನಹಳ್ಳಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. | | |
|---|---|---|
| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
| 1 | ಶ್ರೀ ಕೃಷ್ಣಮೂರ್ತಿ | ಅಧ್ಯಕ್ಷರು |
| 2 | ಶ್ರೀ ರಾಮಕೃಷ್ಣ | ನಿರ್ದೇಶಕರು |
| 3 | ಶ್ರೀ ಉಮೇಶ ಟಿ | ನಿರ್ದೇಶಕರು |
| 4 | ಶ್ರೀ ಹನುಮಂತಪ್ಪ | ನಿರ್ದೇಶಕರು |
| 5 | ಶ್ರೀ ಪ್ರಭಾಕರ | ನಿರ್ದೇಶಕರು |
| 6 | ಶ್ರೀ ಶ್ರೀರಾಮಪ್ಪ | ನಿರ್ದೇಶಕರು |
| 7 | ಶ್ರೀ ದಿನಾಕರ್ | ನಿರ್ದೇಶಕರು |
| 8 | ಶ್ರೀ ಚಿನ್ನಪ್ಪ | ನಿರ್ದೇಶಕರು |
| 9 | ಶ್ರೀ ನಾಗೇಶ್ | ನಿರ್ದೇಶಕರು |
| 10 | ಶ್ರೀ ಸಾಕಮ್ಮ | ನಿರ್ದೇಶಕರು |
| 11 | ಶ್ರೀಮತಿ ದೀಪ | ನಿರ್ದೇಶಕರು |
| 12 | ಶ್ರೀಮತಿ ವೆಂಕಟಮ್ಮ | ನಿರ್ದೇಶಕರು |
| 13 | ಶ್ರೀಮತಿ ಶಾಂತಮ್ಮ | ನಿರ್ದೇಶಕರು |

| 11. ಶ್ರೀ ಗಂಗೆ ಮೀನುಗಾರರ ಸಹಕಾರ ಸಂಘ (ನಿ), ಪಟಾಲಮ್ಮ ಬಡವಾಣೆ, ಕೆರೆಕೋಡಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. | | |
|---|---|---|
| ಕ್ರ.ಸಂ | ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ವಿವರ | ಪದನಾಮ |
| 1 | ಶ್ರೀ ರವಿಕುಮಾರ್ ಎಂ.ಎಂ | ಅಧ್ಯಕ್ಷರು |
| 2 | ಶ್ರೀ ಚಂದ್ರಪ್ಪ ಎಂ.ಬಿ | ನಿರ್ದೇಶಕರು |
| 3 | ಶ್ರೀ ಜಯರಾಮ್ ಎ | ನಿರ್ದೇಶಕರು |
| 4 | ಶ್ರೀ ಮುರಳಿ ವೈ.ಎನ್ | ನಿರ್ದೇಶಕರು |
| 5 | ಶ್ರೀ ಚೇತನ್ ವಿ | ನಿರ್ದೇಶಕರು |
| 6 | ಶ್ರೀ ಪೆರಮಾಳಪ್ಪ ಎಂ | ನಿರ್ದೇಶಕರು |
| 7 | ಶ್ರೀ ವೈ.ಎನ್ ನಾರಾಯಣಸ್ವಾಮಿ | ನಿರ್ದೇಶಕರು |
| 8 | ಶ್ರೀ ಮುನಿಶಾಮಿ ವಿ | ನಿರ್ದೇಶಕರು |
| 9 | ಶ್ರೀ ಎಂ.ಜಿ ನಾರಾಯಣಸ್ವಾಮಿ | ನಿರ್ದೇಶಕರು |
| 10 | ಶ್ರೀ ದಿಲೀಪ್ ಕುಮಾರ್ ಎ.ವಿ | ನಿರ್ದೇಶಕರು |
| 11 | ಶ್ರೀ ಚಿನ್ನಸ್ವಾಮಿ | ನಿರ್ದೇಶಕರು |
| 12 | ಶ್ರೀಮತಿ ಮಂಜುಳ | ನಿರ್ದೇಶಕರು |
| 13 | ಶ್ರೀಮತಿ ಸೌಮ್ಯ | ನಿರ್ದೇಶಕರು |

***

ಅನುಬಂಧ-2(LAQ-24)

ಮೀನುಗಾರಿಕೆ ಸಹಕಾರ ಸಂಘಗಳ ವಿವರ

| ಕ್ರ. ಸಂ. | ತಾಲ್ಲೂಕು | ಸಹಕಾರ ಸಂಘಗಳ ಪೂರ್ಣ ಹೆಸರು ಮತ್ತು ವಿಳಾಸ |
|---|---|---|
| 1 | ಕೋಲಾರ | ತಾಲ್ಲೂಕು ಮೀನುಗಾರರ ಸಹಕಾರ ಸಂಘ(ನಿ), ಕುರುಬರಪೇಟೆ, ಕೋಲಾರ ಟೌನ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ. |
| 2 | ಕೋಲಾರ | ಶ್ರೀ ಸಫಲಮ್ಮದೇವಿ, ಮೀನುಗಾರರ ಸಹಕಾರ ಸಂಘ (ನಿ)ಟೇಕಲ್ ರೋಡ್, ಜಯನಗರ 'ಬಿ' ಬ್ಲಾಕ್, ಕೋಲಾರ ಟೌನ್, ಕೋಲಾರ |
| 3 | ಕೋಲಾರ | ಶ್ರೀ ಗಂಗೆ ಮೀನುಗಾರರ ಸಹಕಾರ ಸಂಘ(ನಿ),ಅರಳೀಮರದಹೊಸಹಳ್ಳಿ, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ. |
| 4 | ಕೋಲಾರ | ಸೋಮಾಂಬುಧಿ ಎಸ್ ಅಗ್ರಹಾರ ಅಮಾನಿಕೆರೆ ಮೀನು ಸಾಕಾಣಿಕೆದಾರರ ಸಹಕಾರ ಸಂಘ (ನಿ),ಸೋಮಾಂಬುದಿ ಅಗ್ರಹಾರ, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ. |
| 5 | ಮುಳಬಾಗಲು | ಶ್ರೀ ಸೋಮೇಶ್ವರಸ್ವಾಮಿ, ಮೀನು ಉತ್ಪನ್ನ ಮತ್ತು ಮಾರಾಟ ಸಹಕಾರ ಸಂಘ(ನಿ),#61, ಕೆ.ಜಿ.ಎಫ್ ರೋಡ್, ನೇತಾಜಿ ನಗರ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ. |
| 6 | ಕೆ.ಜಿ.ಎಫ್ | ತಾಲ್ಲೂಕು ಮೀನುಗಾರರ ಸಹಕಾರ ಸಂಘ(ನಿ),ಬೇತಮಂಗಲ, ಕೆ.ಜಿ.ಎಫ್, ತಾಲ್ಲೂಕು, ಕೋಲಾರ ಜಿಲ್ಲೆ. |
| 7 | ಬಂಗಾರುಪೇಟೆ | ಮೀನುಗಾರರ ಅಭಿವೃದ್ಧಿ ಮತ್ತು ಮಾರಾಟ ಸಹಕಾರ ಸಂಘ(ನಿ),ಪೋಲೇನಹಳ್ಳಿ, ಬಂಗಾರುಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ. |
| 8 | ಕೆ.ಜಿ.ಎಫ್ | ಪಾಲಾರ್ ಮೀನುಗಾರರ ಅಭಿವೃದ್ಧಿ ಮತ್ತು ಮಾರಾಟ ಸಹಕಾರ ಸಂಘ(ನಿ),ಕಂಗಾಂಡ್ಲಹಳ್ಳಿ, ಕೆ.ಜಿ.ಎಫ್ ತಾಲ್ಲೂಕು, ಕೋಲಾರ ಜಿಲ್ಲೆ. |
| 9 | ಶ್ರೀನಿವಾಸಪುರ | ತಾಲ್ಲೂಕು ಮೀನುಗಾರರ ಸಹಕಾರ ಸಂಘ(ನಿ),ಶ್ರೀನಿವಾಸಪುರ ಟೌನ್, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ. |
| 10 | ಮಾಲೂರು | ಶ್ರೀ ವನ್ನಮ್ಮ ಚೆನ್ನಮ್ಮ, ಮೀನುಗಾರರ ಸಹಕಾರ ಸಂಘ(ನಿ),ತಿಮ್ಮನಾಯಕನಹಳ್ಳಿ, ಮಾಲೂರು ತಾಲ್ಲೂಕು,ಕೋಲಾರ ಜಿಲ್ಲೆ. |
| 11 | ಮಾಲೂರು | ಶ್ರೀ ಗಂಗೆ ಮೀನುಗಾರರ ಸಹಕಾರ ಸಂಘ(ನಿ),ಪಟಾಲಮ್ಮ ಬಡಾವಣೆ, ಕೆರೆಕೋಡಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. |

***

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 240 |
| ಸದಸ್ಯರ ಹೆಸರು | ಶ್ರೀ ಬಸವನಗೌಡ ದದ್ದಲ |
| ಉತ್ತರಿಸುವ ದಿನಾಂಕ | 12-09-2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ರಾಯಚೂರು ಜಿಲ್ಲೆಗೆ ದೇವಾಲಯ ಅಭಿವೃದ್ಧಿಗಾಗಿ ಬಿಡುಗಡೆ ಮಾಡಿದ ಅನುದಾನ ಎಷ್ಟು; (ವಿಧಾನಸಭಾ ಕ್ಷೇತ್ರವಾರು ಆದೇಶದ ಪ್ರತಿಯನ್ನು ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಒಟ್ಟು ರೂ.**1033.27**ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ. ವಿವರಗಳು ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ ನೋಡಿ) |

ರೂ.ಲಕ್ಷಗಳಲ್ಲಿ

| ಯೋಜನೆ | 2019-20 | 2020-21 | 2021-22 | ಒಟ್ಟು |
|---|---|---|---|---|
| ದುರಸ್ತಿ/ಜೀರ್ಣೋದ್ಧಾರ/ನಿರ್ಮಾಣ | 256.00 | 297.00 | 65.00 | **618.00** |
| ಆರಾಧನಾ ಯೋಜನೆ | 29.68 | 23.10 | 23.10 | **75.88** |
| ಪರಿಶಿಷ್ಟ ಜಾತಿ ಉಪಯೋಜನೆ | 47.32 | 36.96 | 36.96 | **121.24** |
| ಗಿರಿಜನ ಉಪ ಯೋಜನೆ | 7.11 | 5.53 | 5.51 | **18.15** |
| ಅನುಸೂಚಿತ ಜಾತಿ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆ 2013ರಡಿ ಟಿ.ಎಸ್.ಪಿ ಕಾರ್ಯಕ್ರಮಕ್ಕಾಗಿ | | | 200.00 | **200** |
| **ಒಟ್ಟು** | **340.11** | **362.59** | **330.57** | **1033.27** |

ಆದೇಶದ ಪ್ರತಿಗಳನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | 2020-21 ಹಾಗೂ 2021-22ನೇ ಸಾಲಿನಲ್ಲಿ ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರದಲ್ಲಿರುವ ಮುಜರಾಯಿ ಇಲಾಖೆಗೆ ಒಳಪಡುವ ದೇವಾಲಯಗಳಿಗೆ ಬಿಡುಗಡೆಯಾದ ಅನುದಾನ ಎಷ್ಟು; (ವಿವರ ನೀಡುವುದು) | ರಾಯಚೂರು ಗ್ರಾಮೀಣ ವಿಧಾನ ಸಭಾ ಕ್ಷೇತ್ರದಲ್ಲಿರುವ ಮುಜರಾಯಿ ಇಲಾಖೆಗೆ ಒಳಪಡುವ ದೇವಾಲಯಗಳಿಗೆ 2020-21 ಹಾಗೂ 2021-22ನೇ ಸಾಲಿನಲ್ಲಿ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ. 2020-21 ಹಾಗೂ 2021-22ನೇ ಸಾಲಿನಲ್ಲಿ ರಾಯಚೂರು ಗ್ರಾಮೀಣ ವಿಧಾನ ಸಭಾ ಕ್ಷೇತ್ರದ ಮುಜರಾಯಿಯೇತರ ದೇವಾಲಯಗಳಿಗೆ ಈ ಕೆಳಕಂಡ ಯೋಜನೆಯಡಿ ರೂ.47.31ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ವಿವರ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ ನೋಡಿ) |

ರೂ.ಲಕ್ಷಗಳಲ್ಲಿ

| ಯೋಜನೆ | 2020-21 | 2021-22 | ಒಟ್ಟು |
|---|---|---|---|
| ದುರಸ್ತಿ/ಜೀರ್ಣೋದ್ಧಾರ/ನಿರ್ಮಾಣ | | | - |
| ಆರಾಧನಾ ಯೋಜನೆ | 3.30 | 3.30 | 6.60 |
| ಪರಿಶಿಷ್ಟ ಜಾತಿ ಉಪಯೋಜನೆ | 5.28 | 5.28 | 10.56 |
| ಗಿರಿಜನ ಉಪ ಯೋಜನೆ | 0.79 | 0.79 | 1.58 |
| ಅನುಸೂಚಿತ ಜಾತಿ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆ-2013ರಡಿ ಟಿ.ಎಸ್.ಪಿ ಕಾರ್ಯಕ್ರಮಕ್ಕಾಗಿ | | 28.57 | **28.57** |
| **ಒಟ್ಟು** | **9.37** | **37.94** | **47.31** |

ದೇವಾಲಯವಾರು ವಿವರವನ್ನು **ಅನುಬಂಧ-2**ರಲ್ಲಿ ಲಗತ್ತಿಸಿದೆ.

| | | |
|---|---|---|
| ಇ) | ಕಳೆದ ಮೂರು ವರ್ಷಗಳಿಂದ ಅನುದಾನ ಹಂಚಿಕೆ ಮಾಡುವಲ್ಲಿ ತಾರತಮ್ಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದಿಂದ ಮೇಲ್ಕಂಡಂತೆ ವಿವಿಧ ಯೋಜನೆಗಳಡಿ ಅನುದಾನ ಮಂಜೂರು ಮಾಡಿ ಬಿಡುಗಡೆಯಾಗಿರುವುದರಿಂದ ತಾರತಮ್ಯದ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ಬಂದಿದ್ದಲ್ಲಿ, ಈ ಕ್ಷೇತ್ರಕ್ಕೆ ಅನುದಾನ ಬಿಡುಗಡೆ ಮಾಡಲು ಪ್ರಸ್ತಾವನೆಗಳನ್ನು ಸಲ್ಲಿಸಲಾಗಿದೆಯೇ? (ವಿವರ ನೀಡುವುದು) | ಸರ್ಕಾರದ ಅನುದಾನ ಮಂಜೂರಾತಿ ಕೋರಿ ರಾಜ್ಯಾದ್ಯಂತ ಹೆಚ್ಚಿನ ಬೇಡಿಕೆ ಇದ್ದು, ಪ್ರತಿ ಆರ್ಥಿಕ ವರ್ಷ ಆಯವ್ಯಯದಲ್ಲಿ ಒದಗಿಸಿದ ಅನುದಾನದಲ್ಲಿ ಜಿಲ್ಲಾವಾರು/ಕ್ಷೇತ್ರವಾರು ಲಭ್ಯತೆಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. |

ಸಂಖ್ಯೆ: ಕಂಇ 142 ಮುಸಪ್ರ 2022

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು

240

ಅನುಬಂಧ- 01



<u>ಕರ್ನಾಟಕ ಸರ್ಕಾರದ ನಡವಳಿಗಳು</u>

ವಿಷಯ:- 2020-21ನೇ ಸಾಲಿನ ಆಯವ್ಯಯದಲ್ಲಿ ಆರಾಧನಾ ಯೋಜನೆಯಡಿ ಒದಗಿಸಲಾದ ಸಹಾಯಾನುದಾನವನ್ನು ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ:- 1. ಸರ್ಕಾರದ ಆದೇಶ ಸಂಖ್ಯೆ:ಕಂಇ 67 ಮುಸರ 2007, ದಿನಾಂಕ:10.10.2008.

2. ಸರ್ಕಾರದ ಆದೇಶ ಸಂಖ್ಯೆ:ಕಂಇ 59 ಮುಅಬಿ 2020, ದಿನಾಂಕ:06.08.2020.

3. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಸಿಟಿ 03 ಸಿಆರ್ 01/2020-21 ದಿನಾಂಕ:01-12-2020

* - *

<u>ಪ್ರಸ್ತಾವನೆ:-</u>

ಮೇಲೆ ಓದಲಾದ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಆರಾಧನಾ ಯೋಜನೆಯನ್ನು ಅನುಷ್ಠಾನಗೊಳಿಸುವ ಕುರಿತು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರದ ಆದೇಶದಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಆರಾಧನಾ ಯೋಜನೆಯಡಿ ಒದಗಿಸಲಾದ ರೂ.740.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಕಂತಾಗಿ ರೂ.370.00 ಲಕ್ಷಗಳನ್ನು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಮೇಲೆ ಓದಲಾದ (3)ರಲ್ಲಿನ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2250-00-103-5-09-ಆರಾಧನಾ-059-ಇತರೆ ಖರ್ಚು" ಅಡಿಯಲ್ಲಿ ರೂ.740.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಯೋಜನೆಗೆ ಒದಗಿಸಿರುವ ರೂ.740.00 ಲಕ್ಷಗಳ ಅನುದಾನದಲ್ಲಿ ಲೇಖಾನುದಾನದನ್ವಯ 2020-21ನೇ ಸಾಲಿನ ಮೂರು ಮತ್ತು ನಾಲ್ಕನೇ ತ್ರೈಮಾಸಿಕ ಕಂತಾಗಿ ರೂ.370.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**<u>ಸರ್ಕಾರಿ ಆದೇಶ ಸಂಖ್ಯೆ: ಕಂಇ 59 ಮುಅಬಿ 2020;</u>**
**<u>ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್, 2020</u>**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2020-21ನೇ ಸಾಲಿನ ಆಯವ್ಯಯದಲ್ಲಿ ಆರಾಧನಾ ಯೋಜನೆಯಡಿ ಒದಗಿಸಲಾದ ರೂ.740.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೂರು ಮತ್ತು ನಾಲ್ಕನೇ ತ್ರೈಮಾಸಿಕ ಕಂತಾಗಿ ರೂ.370.00 ಲಕ್ಷ (ಮುನ್ನೂರ ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಹಂಚಿಕೆ ಮಾಡಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

<u>ಷ ರ ತ್ತು ಗ ಳು</u>

(ಅ) ಈ ಯೋಜನೆಯಡಿ ಒದಗಿಸಲಾದ ಅನುದಾನವನ್ನು ಆರಾಧನಾ ಯೋಜನೆಯ ಸರ್ಕಾರದ ಆದೇಶ ಸಂಖ್ಯೆ:ಕಂಇ 67 ಮುಸರ 2007 ದಿನಾಂಕ:10-10-2008ರ ಮಾರ್ಗಸೂಚಿಯನ್ವಯ ಕಾಮಗಾರಿ ಕೈಗೊಳ್ಳತಕ್ಕದ್ದು;

. . . 2

(ಆ) ಸದರಿ ಯೋಜನೆಯಡಿ ಒದಗಿಸುವ ಅನುದಾನವನ್ನು ಆಯಾಯ ಜಿಲ್ಲಾಧಿಕಾರಿಗಳು ಆರಾಧನಾ ಸಮಿತಿಗೆ ಕಳುಹಿಸತಕ್ಕದ್ದು; ಆರಾಧನಾ ಸಮಿತಿಯ ಯೋಜನೆಯ ಮಾರ್ಗಸೂಚಿಯನ್ವಯ ನಿಯಮಾನುಸಾರ ಕಾಮಗಾರಿ ಕೈಗೊಳ್ಳತಕ್ಕದ್ದು,

(ಇ) ಈ ಯೋಜನೆಯಡಿ ಒದಗಿಸಲಾದ ಅನುದಾನದಲ್ಲಿ ನಾಲ್ಕು ಕಂತುಗಳಲ್ಲಿ ಇದು ಮೂರನೇ ಮತ್ತು ನಾಲ್ಕನೇ ಕಂತು ಎಂದು ಪರಿಗಣಿಸಿ, ಆಯಾಯ ಕ್ಷೇತ್ರಕ್ಕೆ ಹಂಚಿಕೆ ಮಾಡತಕ್ಕದ್ದು.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಆರಾಧನಾ ಯೋಜನೆ ಅಡಿ ಬಿಡುಗಡೆ ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಡಿ.ಡಿ.ಓ ಸಂಕೇತಕ್ಕೆ ಅಪ್‌ಲೋಡ್ ಮಾಡುವುದು. ಜಿಲ್ಲಾಧಿಕಾರಿಗಳು ಸದರಿ ಯೋಜನೆಗೆ ಬಿಡುಗಡೆಯಾದ ಅನುದಾನವನ್ನು ನಿಯಮಾನುಸಾರ ಪರಿಶೀಲಿಸಿ, ಡಿ.ಸಿ ಬಿಲ್ಲಿನ ಮುಖಾಂತರ ಸೆಳೆದು ಜಿಲ್ಲಾ ಸಮಿತಿಯು ಸೂಚಿಸುವ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2250-00-103-5-09-ಆರಾಧನಾ-059-ಇತರೆ ಖರ್ಚು" ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆಆಇ 15 ಬಿಪಿಇ 2019 ದಿನಾಂಕ:01-04-2020ರ ಸಹಮತದೊಂದಿಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 04 ಟಿಎಫ್‌ಪಿ 2020 ದಿನಾಂಕ:24-11-2020ರಲ್ಲಿ ಇಲಾಖಾ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

M. L. Varalakshmi
(ಎಂ.ಎಲ್.ವರಲಕ್ಷ್ಮಿ) 19/12/2020
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ಹಿಂದೂ ಧಾರ್ಮಿಕ ದತ್ತಿ ಇಲಾಖೆ)

ಇವರಿಗೆ,

(1) ಪ್ರಧಾನ ಮಹಾಲೇಖಪಾಲರು, (ಜಿ & ಎಸ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ', ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು – 560001
(2) ಪ್ರಧಾನ ಮಹಾಲೇಖಪಾಲರು (ಇ & ಆರ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ' ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು – 560001.
(3) ಪ್ರಧಾನ ಮಹಾಲೇಖಪಾಲರು, (ಎ& ಇ)ರವರ ಕಾರ್ಯದರ್ಶಿ, ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ5329, ಬೆಂಗಳೂರು - 560001.
(4) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
(5) ಎಲ್ಲಾ ಜಿಲ್ಲಾಧಿಕಾರಿಗಳಿಗೆ - ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ.

ಪ್ರತಿ:-

(1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಆಪ್ತ ಕಾರ್ಯದರ್ಶಿ.
(2) ಸರ್ಕಾರದ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ, ಯು.ಪಿ.ಓ.ಆರ್ & ಹಿಂದೂ ಧಾರ್ಮಿಕ ದತ್ತಿ ಇಲಾಖೆ) ಇವರ ಆಪ್ತ ಸಹಾಯಕರು.
(3) ರಕ್ಷಾ ಕಡತ / ಹೆಚ್ಚುವರಿ ಪ್ರತಿ.



## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- 2020-21ನೇ ಸಾಲಿನಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯಡಿ ಸಹಾಯಾನುದಾನವನ್ನು ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ:- (1) ಸರ್ಕಾರದ ಆದೇಶ ಸಂಖ್ಯೆ ಕಂಇ 189 .ಮುಅಬಿ 2011 ದಿನಾಂಕ:19-09-2011.

(2) ಸರ್ಕಾರದ ಆದೇಶ ಸಂಖ್ಯೆಕಂಇ 59 ಮುಅಬಿ 2020 (ಭಾಗ-1) ದಿನಾಂಕ:06.08.2020

(3) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆಎಸಿಟಿ 03 ಸಿಆರ್ 01/2020-21 ದಿನಾಂಕ:01-12-2020

* - *

ಪ್ರಸ್ತಾವನೆ:-

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯ ಕಾರ್ಯಯೋಜನೆ ಜಾರಿಗೊಳಿಸುವ ಕುರಿತು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರದ ಆದೇಶದಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯಡಿ ಒದಗಿಸಲಾದ ರೂ.1183.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಕಂತಾಗಿ ರೂ.591.00 ಲಕ್ಷಗಳನ್ನು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಮೇಲೆ ಓದಲಾದ (3)ರಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2250-00-103-5-09-422-ಪರಿಶಿಷ್ಟ ಜಾತಿ ಉಪಯೋಜನೆ" ಅಡಿಯಲ್ಲಿ ರೂ.1183.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಯೋಜನೆಗೆ ಒದಗಿಸಿರುವ ರೂ.1183.00 ಲಕ್ಷಗಳ ಅನುದಾನದಲ್ಲಿ ಲೇಖಾನುದಾನದನ್ವಯ 2020-21ನೇ ಸಾಲಿನ ಮೂರನೇ ಮತ್ತು ನಾಲ್ಕನೇ ತ್ರೈಮಾಸಿಕ ಕಂತಾಗಿ ರೂ.591.50 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 59 ಮುಅಬಿ 2020 (ಭಾಗ-1);**
**ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್, 2020**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2020-21ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯಡಿ ಒದಗಿಸಲಾದ ರೂ.1183.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೂರನೇ ಮತ್ತು ನಾಲ್ಕನೇ

. . . 2

ತ್ರೈಮಾಸಿಕ ಕಂತಾಗಿ ರೂ.591.50 ಲಕ್ಷ (ಐದು ನೂರ ತೊಂಭತ್ತೊಂದು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಹಂಚಿಕೆ ಮಾಡಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

ಷರತ್ತುಗಳು

(ಅ) ಈ ಯೋಜನೆಯಡಿ ಒದಗಿಸಲಾದ ಅನುದಾನವನ್ನು ಪರಿಶಿಷ್ಟ ಜಾತಿ ಉಪಯೋಜನೆಯ ಸರ್ಕಾರದ ಆದೇಶ ಸಂಖ್ಯೆ:ಸಂಇ 189 ಮುಅಬಿ 2011 ದಿನಾಂಕ:19-09-2011ರ ಮಾರ್ಗಸೂಚಿಯನ್ವಯ ಕಾಮಗಾರಿ ಕೈಗೊಳ್ಳತಕ್ಕದ್ದು;

(ಆ) ಸದರಿ ಯೋಜನೆಯಡಿ ಒದಗಿಸುವ ಅನುದಾನವನ್ನು ಆಯಾಯ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿರುವ ಪರಿಶಿಷ್ಟ ಜಾತಿ ಉಪಯೋಜನೆಯ ಸಮಿತಿಗೆ ಕಳುಹಿಸತಕ್ಕದ್ದು; ಜಿಲ್ಲಾ ಸಮಿತಿಯು ಯೋಜನೆಯ ಮಾರ್ಗಸೂಚಿಯನ್ವಯ ನಿಯಮಾನುಸಾರ ಕಾಮಗಾರಿ ಕೈಗೊಳ್ಳತಕ್ಕದ್ದು;

(ಇ) ಈ ಯೋಜನೆಯಡಿ ಒದಗಿಸಲಾದ ಅನುದಾನದಲ್ಲಿ ನಾಲ್ಕು ಕಂತುಗಳಲ್ಲಿ ಇದು ಮೂರನೇ ಮತ್ತು ನಾಲ್ಕನೇ ತ್ರೈಮಾಸಿಕ ಕಂತು ಎಂದು ಪರಿಗಣಿಸಿ, ಆಯಾಯ ಕ್ಷೇತ್ರಕ್ಕೆ ಹಂಚಿಕೆ ಮಾಡತಕ್ಕದ್ದು.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಪರಿಶಿಷ್ಟ ಜಾತಿ ಉಪಯೋಜನೆ ಅಡಿ ಬಿಡುಗಡೆ ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಡಿ.ಡಿ.ಓ ಸಂಕೇತಕ್ಕೆ ಅಪ್‌ಲೋಡ್ ಮಾಡುವುದು. ಜಿಲ್ಲಾಧಿಕಾರಿಗಳು ಸದರಿ ಯೋಜನೆಗೆ ಬಿಡುಗಡೆಯಾದ ಅನುದಾನವನ್ನು ನಿಯಮಾನುಸಾರ ಪರಿಶೀಲಿಸಿ, ಡಿ.ಸಿ ಬಿಲ್ಲಿನ ಮುಖಾಂತರ ಸೆಳೆದು ಜಿಲ್ಲಾ ಸಮಿತಿಯು ಸೂಚಿಸುವ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2250-00-103-5-09-422-ಪರಿಶಿಷ್ಟ ಜಾತಿ ಉಪಯೋಜನೆ" ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ:ಆಇ 15 ಬಿಪಿಇ 2019 ದಿನಾಂಕ:01-04-2020ರ ಸಹಮತದೊಂದಿಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 04 ಟಿಎಫ್‌ಪಿ 2020 ದಿನಾಂಕ:24-11-2020ರಲ್ಲಿ ಇಲಾಖಾ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

M. L. Varalakshmi 19/12/2020
(ಎಂ.ಎಲ್.ವರಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ಹಿಂದೂ ಧಾರ್ಮಿಕ ದತ್ತಿ ಇಲಾಖೆ)

ಇವರಿಗೆ,

(1) ಪ್ರಧಾನ ಮಹಾಲೇಖಪಾಲರು, (ಜಿ & ಎಸ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ', ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು - 560001.

(2) ಪ್ರಧಾನ ಮಹಾಲೇಖಪಾಲರು (ಇ & ಆರ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ' ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು - 560001.



**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ:- 2020-21ನೇ ಸಾಲಿನಲ್ಲಿ ಗಿರಿಜನ ಉಪಯೋಜನೆಯಡಿ ಸಹಾಯಾನುದಾನವನ್ನು ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ:- (1) ಸರ್ಕಾರದ ಆದೇಶ ಸಂಖ್ಯೆ:ಕಂಇ 189 ಮುಅಜಿ 2011 ದಿನಾಂಕ:19-09-2011.

(2) ಸರ್ಕಾರದ ಆದೇಶ ಸಂಖ್ಯೆ ಕಂಇ 59 ಮುಅಜಿ 2020 (ಭಾಗ-2), ದಿನಾಂಕ:06.08.2020.

(3) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಸಿಟಿ 03 ಸಿಆರ್ 01/2019-20 ದಿನಾಂಕ:01-12-2020

* - *

**ಪ್ರಸ್ತಾವನೆ:-**

ಮೇಲೆ ಓದಲಾದ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಗಿರಿಜನ ಉಪಯೋಜನೆಯ ಕಾರ್ಯಯೋಜನೆ ಜಾರಿಗೊಳಿಸುವ ಕುರಿತು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರದ ಆದೇಶದಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಗಿರಿಜನ ಉಪ ಯೋಜನೆಯಡಿ ಒದಗಿಸಲಾದ ರೂ.177.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಕಂತಾಗಿ ರೂ.88.50 ಲಕ್ಷಗಳನ್ನು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಲಾಗಿದೆ.

ಮೇಲೆ ಓದಲಾದ (3)ರಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2250-00-103-5-09-423-ಗಿರಿಜನ ಉಪಯೋಜನೆ" ಅಡಿಯಲ್ಲಿ ರೂ.177.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಯೋಜನೆಗೆ ಒದಗಿಸಿರುವ ರೂ.177.00 ಲಕ್ಷಗಳ ಅನುದಾನದಲ್ಲಿ ಲೇಖಾನುದಾನದನ್ವಯ 2020-21ನೇ ಸಾಲಿನ ಮೂರನೇ ಮತ್ತು ನಾಲ್ಕನೇ ತ್ರೈಮಾಸಿಕ ಕಂತಾಗಿ ರೂ.88.50 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 59 ಮುಅಜಿ 2020 (ಭಾ-2);**
**ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್, 2020**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2020-21ನೇ ಸಾಲಿನ ಆಯವ್ಯಯದಲ್ಲಿ ಗಿರಿಜನ ಉಪ ಯೋಜನೆಯಡಿ ಒದಗಿಸಲಾದ ರೂ.177.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೂರನೇ ಮತ್ತು ನಾಲ್ಕನೇ ತ್ರೈಮಾಸಿಕ ಕಂತಾಗಿ ರೂ.88.50 ಲಕ್ಷ (ಎಂಭತ್ತೆಂಟು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಹಂಚಿಕೆ ಮಾಡಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

**ಷ ರ ತ್ತು ಗ ಳು**

(ಅ) ಈ ಯೋಜನೆಯಡಿ ಒದಗಿಸಲಾದ ಅನುದಾನವನ್ನು ಗಿರಿಜನ ಉಪಯೋಜನೆಯ ಸರ್ಕಾರದ ಆದೇಶ ಸಂಖ್ಯೆ:ಕಂಇ 189 ಮುಅಜಿ 2011 ದಿನಾಂಕ:19-09-2011ರ ಮಾರ್ಗಸೂಚಿಯನ್ವಯ ಕಾಮಗಾರಿ ಕೈಗೊಳ್ಳತಕ್ಕದ್ದು;

. . . 2

(ಆ) ಸದರಿ ಯೋಜನೆಯಡಿ ಒದಗಿಸುವ ಅನುದಾನವನ್ನು ಆಯಾಯ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿರುವ ಗಿರಿಜನ ಉಪಯೋಜನೆಯ ಸಮಿತಿಗೆ ಕಳುಹಿಸತಕ್ಕದ್ದು; ಜಿಲ್ಲಾ ಸಮಿತಿಯು ಯೋಜನೆಯ ಮಾರ್ಗಸೂಚಿಯನ್ವಯ ನಿಯಮಾನುಸಾರ ಕಾಮಗಾರಿ ಕೈಗೊಳ್ಳತಕ್ಕದ್ದು;

(ಇ) ಈ ಯೋಜನೆಯಡಿ ಒದಗಿಸಲಾದ ಅನುದಾನದಲ್ಲಿ ನಾಲ್ಕು ಕಂತುಗಳಲ್ಲಿ ಇದು ಮೂರನೇ ಮತ್ತು ನಾಲ್ಕನೇ ತ್ರೈಮಾಸಿಕ ಕಂತು ಎಂದು ಪರಿಗಣಿಸಿ, ಆಯಾಯ ಕ್ಷೇತ್ರಕ್ಕೆ ಹಂಚಿಕೆ ಮಾಡತಕ್ಕದ್ದು.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಗಿರಿಜನ ಉಪಯೋಜನೆ ಅಡಿ ಬಿಡುಗಡೆ ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಡಿ.ಡಿ.ಓ ಸಂಕೇತಕ್ಕೆ ಅಪ್‌ಲೋಡ್ ಮಾಡುವುದು. ಜಿಲ್ಲಾಧಿಕಾರಿಗಳು ಸದರಿ ಯೋಜನೆಗೆ ಬಿಡುಗಡೆಯಾದ ಅನುದಾನವನ್ನು ನಿಯಮಾನುಸಾರ ಪರಿಶೀಲಿಸಿ, ಡಿ.ಸಿ ಬಿಲ್ಲಿನ ಮುಖಾಂತರ ಸೆಳೆದು ಜಿಲ್ಲಾ ಸಮಿತಿಯು ಸೂಚಿಸುವ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2250-00-103-5-09-423-ಗಿರಿಜನ ಉಪಯೋಜನೆ" ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆಆಇ 15 ಬಿಪಿಇ 2019 ದಿನಾಂಕ:01-04-2020ರ ಸಹಮತದೊಂದಿಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆಎಫ್‌ಡಿ 04 ಟಿಎಫ್‌ಪಿ 2020 ದಿನಾಂಕ:24-11-2020ರಲ್ಲಿ ಇಲಾಖಾ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

M. L. Varalakshmi 19/12/2020
(ಎಂ.ಎಲ್.ವರಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ಹಿಂದೂ ಧಾರ್ಮಿಕ ದತ್ತಿ ಇಲಾಖೆ)

ಇವರಿಗೆ,

1. ಪ್ರಧಾನ ಮಹಾಲೇಖಪಾಲರು, (ಜಿ & ಎಸ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ', ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು - 560001.
2. ಪ್ರಧಾನ ಮಹಾಲೇಖಪಾಲರು (ಇ & ಆರ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ' ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು - 560001.
3. ಪ್ರಧಾನ ಮಹಾಲೇಖಪಾಲರು, (ಎ& ಇ)ರವರ ಕಾರ್ಯದರ್ಶಿ, ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ5329, ಬೆಂಗಳೂರು - 560001.
4. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
5. ಎಲ್ಲಾ ಜಿಲ್ಲಾಧಿಕಾರಿಗಳಿಗೆ - ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ.

ಪ್ರತಿ:-

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಆಪ್ತ ಕಾರ್ಯದರ್ಶಿ.
2. ಸರ್ಕಾರದ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ, ಯು.ಪಿ.ಓ.ಆರ್ & ಹಿಂದೂ ಧಾರ್ಮಿಕ ದತ್ತಿ ಇಲಾಖೆ) ಇವರ ಆಪ್ತ ಸಹಾಯಕರು.
3. ರಕ್ಷಾ ಕಡತ / ಹೆಚ್ಚುವರಿ ಪ್ರತಿ.



ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- 2020-21ನೇ ಸಾಲಿನಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯಡಿ ಸಹಾಯಾನುದಾನವನ್ನು ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ:- (1) ಸರ್ಕಾರದ ಆದೇಶ ಸಂಖ್ಯೆ ಕಂಇ 189 ಮುಅಬಿ 2011 ದಿನಾಂಕ:19-09-2011.
(2) ಸರ್ಕಾರದ ಆದೇಶ ಸಂಖ್ಯೆ:ಕಂಇ 59 ಮುಅಬಿ 2020 (ಭಾಗ-1) ದಿನಾಂಕ:06.08.2020
(3) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಸಿಟಿ 03 ಸಿಆರ್ 01/2020-21 ದಿನಾಂಕ:01-12-2020

* - *

ಪ್ರಸ್ತಾವನೆ:-

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯ ಕಾರ್ಯಯೋಜನೆ ಜಾರಿಗೊಳಿಸುವ ಕುರಿತು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರದ ಆದೇಶದಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯಡಿ ಒದಗಿಸಲಾದ ರೂ.1183.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಕಂತಾಗಿ ರೂ.591.00 ಲಕ್ಷಗಳನ್ನು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಮೇಲೆ ಓದಲಾದ (3)ರಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2250-00-103-5-09-422-ಪರಿಶಿಷ್ಟ ಜಾತಿ ಉಪಯೋಜನೆ" ಅಡಿಯಲ್ಲಿ ರೂ.1183.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಯೋಜನೆಗೆ ಒದಗಿಸಿರುವ ರೂ.1183.00 ಲಕ್ಷಗಳ ಅನುದಾನದಲ್ಲಿ ಲೇಖಾನುದಾನದನ್ವಯ 2020-21ನೇ ಸಾಲಿನ ಮೂರನೇ ಮತ್ತು ನಾಲ್ಕನೇ ತ್ರೈಮಾಸಿಕ ಕಂತಾಗಿ ರೂ.591.50 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

ಸರ್ಕಾರಿ ಆದೇಶ ಸಂಖ್ಯೆ: ಕಂಇ 59 ಮುಅಬಿ 2020 (ಭಾಗ-1);
ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್, 2020

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2020-21ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಠ ಜಾತಿ ಉಪಯೋಜನೆಯಡಿ ಒದಗಿಸಲಾದ ರೂ.1183.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೂರನೇ ಮತ್ತು ನಾಲ್ಕನೇ



# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- 2020-21ನೇ ಸಾಲಿನಲ್ಲಿ ಗಿರಿಜನ ಉಪಯೋಜನೆಯಡಿ ಸಹಾಯಾನುದಾನವನ್ನು ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ:- (1) ಸರ್ಕಾರದ ಆದೇಶ ಸಂಖ್ಯೆಕಂಇ 189 ಮುಅಬಿ 2011 ದಿನಾಂಕ:19-09-2011

(2) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆಎಸಿಟಿ 03 ಸಿಆರ್ 01/2019-20 ದಿನಾಂಕ:06-07-2020

* - *

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಗಿರಿಜನ ಉಪಯೋಜನೆಯ ಕಾರ್ಯಯೋಜನೆ ಜಾರಿಗೊಳಿಸುವ ಕುರಿತು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2250-00-103-5-09-423-ಗಿರಿಜನ ಉಪಯೋಜನೆ" ಅಡಿಯಲ್ಲಿ ರೂ.177.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಯೋಜನೆಗೆ ಒದಗಿಸಿರುವ ರೂ.177.00 ಲಕ್ಷಗಳ ಅನುದಾನದಲ್ಲಿ ಲೇಖಾನುದಾನದನ್ವಯ 2020-21ನೇ ಸಾಲಿನ ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಕಂತಾಗಿ ಮಂಜೂರಾಗಿರುವ 1/2 ಭಾಗ ಅಂದರೆ ರೂ.88.50 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 59 ಮುಅಬಿ 2020 (ಭಾ-2);**
**ಬೆಂಗಳೂರು, ದಿನಾಂಕ: 06 ನೇ ಆಗಸ್ಟ್, 2020**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2020-21ನೇ ಸಾಲಿನ ಆಯವ್ಯಯದಲ್ಲಿ ಗಿರಿಜನ ಉಪ ಯೋಜನೆಯಡಿ ಒದಗಿಸಲಾದ ರೂ.177.00 ಲಕ್ಷಗಳ ಅನುದಾನದಲ್ಲಿ ರಾಜ್ಯದ 224 ವಿಧಾನಸಭಾ ಕ್ಷೇತ್ರಗಳಿಗೆ ಸಮನಾಗಿ ಹಂಚಿಕೆ ಮಾಡಲು ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಕಂತಾಗಿ ರೂ.88.50 ಲಕ್ಷ (ಎಂಭತ್ತೆಂಟು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಹಂಚಿಕೆ ಮಾಡಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

## ಷ ರ ತ್ತು ಗ ಳು

(ಅ) ಈ ಯೋಜನೆಯಡಿ ಒದಗಿಸಲಾದ ಅನುದಾನವನ್ನು ಗಿರಿಜನ ಉಪಯೋಜನೆಯ ಸರ್ಕಾರದ ಆದೇಶ ಸಂಖ್ಯೆ:ಕಂಇ 189 ಮುಅಬಿ 2011 ದಿನಾಂಕ:19-09-2011ರ ಮಾರ್ಗಸೂಚಿಯನ್ವಯ ಕಾಮಗಾರಿ ಕೈಗೊಳ್ಳತಕ್ಕದ್ದು;

(ಆ) ಸದರಿ ಯೋಜನೆಯಡಿ ಒದಗಿಸುವ ಅನುದಾನವನ್ನು ಆಯಾಯ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿರುವ ಗಿರಿಜನ ಉಪಯೋಜನೆಯ ಸಮಿತಿಗೆ ಕಳುಹಿಸತಕ್ಕದ್ದು; ಜಿಲ್ಲಾ ಸಮಿತಿಯು ಯೋಜನೆಯ ಮಾರ್ಗಸೂಚಿಯನ್ವಯ ನಿಯಮಾನುಸಾರ ಕಾಮಗಾರಿ ಕೈಗೊಳ್ಳತಕ್ಕದ್ದು;

(ಇ) ಈ ಯೋಜನೆಯಡಿ ಒದಗಿಸಲಾದ ಅನುದಾನದಲ್ಲಿ ನಾಲ್ಕು ಕಂತುಗಳಲ್ಲಿ ಇದು ಮೊದಲನೇ ಮತ್ತು ಎರಡನೇ ತ್ರೈಮಾಸಿಕ ಕಂತು ಎಂದು ಪರಿಗಣಿಸಿ, ಆಯಾಯ ಕ್ಷೇತ್ರಕ್ಕೆ ಹಂಚಿಕೆ ಮಾಡತಕ್ಕದ್ದು.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಗಿರಿಜನ ಉಪಯೋಜನೆ ಅಡಿ ಬಿಡುಗಡೆ ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಡಿ.ಡಿ.ಓ ಸಂಕೇತಕ್ಕೆ ಅಪ್‌ಲೋಡ್ ಮಾಡುವುದು. ಜಿಲ್ಲಾಧಿಕಾರಿಗಳು ಸದರಿ ಯೋಜನೆಗೆ ಬಿಡುಗಡೆಯಾದ ಅನುದಾನವನ್ನು ನಿಯಮಾನುಸಾರ ಪರಿಶೀಲಿಸಿ, ಡಿ.ಸಿ ಬಿಲ್ಲಿನ ಮುಖಾಂತರ ಸೆಳೆದು ಜಿಲ್ಲಾ ಸಮಿತಿಯು ಸೂಚಿಸುವ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2250-00-103-5-09-423-ಗಿರಿಜನ ಉಪಯೋಜನೆ" ಅಡಿ ಭರಿಸತಕ್ಕದ್ದು.

ಈ ಸಂಬಂಧ ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆಆಇ 15 ಬಿಪಿಇ 2019 ದಿನಾಂಕ:01-04-2020ರ ಸಹಮತದೊಂದಿಗೆ ಹೊರಡಿಸಿದೆ.

ಸರ್ಕಾರದ ಆದೇಶ ಸಂಖ್ಯೆಎಫ್‌ಡಿ 02 ಟಿಎಫ್‌ಪಿ 2020 ದಿನಾಂಕ:30-05-2020ರಲ್ಲಿ ಇಲಾಖಾ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

M.L. Varalakshmi 6/8/2020
(ಎಂ.ಎಲ್.ವರಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಇವರಿಗೆ,

(1) ಪ್ರಧಾನ ಮಹಾಲೇಖಪಾಲರು, (ಜಿ & ಎಸ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ', ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು - 560001.
(2) ಪ್ರಧಾನ ಮಹಾಲೇಖಪಾಲರು (ಇ & ಆರ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ' ಅಂಚೆ ಪೆಟ್ಟಿಗೆ ಸಂಖ್ಯೆ5398, ಬೆಂಗಳೂರು - 560001.
(3) ಪ್ರಧಾನ ಮಹಾಲೇಖಪಾಲರು, (ಎ& ಇ)ರವರ ಕಾರ್ಯದರ್ಶಿ, ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ5329, ಬೆಂಗಳೂರು - 560001.
(4) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
(5) ಎಲ್ಲಾ ಜಿಲ್ಲಾಧಿಕಾರಿಗಳಿಗೆ - ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ.
(6) ನಿರ್ದೇಶಕರು, ಖಜಾನೆ ನಿರ್ದೇಶನಾಲಯ, ವಿ.ವಿ. ಟವರ್, ನೆಲಮಹಡಿ, ಪೋಡಿಯಂ ಬ್ಲಾಕ್, ಅಂಬೇಡ್ಕರ್ ವೀದಿ, ಬೆಂಗಳೂರು 560001.
(7) ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ವಿ.ವಿ. ಟವರ್, ನೆಲಮಹಡಿ, ಪೋಡಿಯಂ ಬ್ಲಾಕ್, ಅಂಬೇಡ್ಕರ್ ವೀದಿ, ಬೆಂಗಳೂರು 560001.

ಪ್ರತಿ:-

(1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ, ಭೂಮಿ & ಯುಪಿಓಆರ್) ಇವರ ಆಪ್ತ ಕಾರ್ಯದರ್ಶಿ.
(2) ಸರ್ಕಾರದ ಜಂಟಿ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ, ಯು.ಪಿ.ಓ.ಆರ್ & ಮುಜರಾಯಿ) ಇವರ ಆಪ್ತ ಸಹಾಯಕರು.
(3) ರಕ್ಷಾ ಕಡತ / ಹೆಚ್ಚುವರಿ ಪ್ರತಿ.

ಪ



ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- 2021-22ನೇ ಸಾಲಿನ ಆಯವ್ಯಯದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ವಿವಿಧ ಯೋಜನೆಗಳಡಿ ಒದಗಿಸಲಾದ ಅನುದಾನವನ್ನು ಬಿಡುಗಡೆ ಮಾಡುವ ಕುರಿತು.

ಓದಲಾಗಿದೆ:- 1. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಸಿಟಿ 03 ಸಿಆರ್ 01/2021-22 ದಿನಾಂಕ:19.11.2021.

2. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿ.ಎಫ್.ಪಿ. 2021, ದಿನಾಂಕ:31.12.2021.

JAN 2022
1115

* - *

ಪ್ರಸ್ತಾವನೆ:-

ಮೇಲೆ ಓದಲಾದ ಕ್ರಮ ಸಂಖ್ಯೆ:01ರಲ್ಲಿನ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ 2021-22ನೇ ಸಾಲಿನ ಆಯವ್ಯಯದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ಈ ಕೆಳಕಂಡ ಯೋಜನೆಗಳಡಿ ಒದಗಿಸಲಾದ ಅನುದಾನದಲ್ಲಿ ನಾಲ್ಕನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಲೆಕ್ಕ ಶೀರ್ಷಿಕೆ | 2021-22ನೇ ಸಾಲಿನ ಆಯವ್ಯಯ ಹಂಚಿಕೆ | ಬಿಡುಗಡೆಯಾಗ ಬೇಕಾಗಿರುವ ಮೊತ್ತ (4/4 ಭಾಗ) |
|---|---|---|---|
| 1) | 2250-00-103-5-09-ಆರಾಧನಾ-059-ಇತರೆ ಖರ್ಚು | 740.00 | 185.00 |
| 2) | 2250-00-103-5-09-422-ಪರಿಶಿಷ್ಟ ಜಾತಿ ಉಪಯೋಜನೆ | 1183.00 | 295.75 |
| 3) | 2250-00-103-5-09-423-ಗಿರಿಜನ ಉಪ ಯೋಜನೆ | 177.00 | 44.25 |
| 4) | 2250-00-103-5-08-ಮಾನಸ ಸರೋವರ ಭಕ್ತಾಧಿಗಳಿಗೆ ನೆರವು-100-ಧನ ಸಹಾಯ/ ಪರಿಹಾರ | 1000.00 | 250.00 |
| 5) | 2250-00-103-5-06-ಯಡಿಯೂರು ಅಭಿವೃದ್ಧಿ-103 ಸಹಾಯಾನುದಾನ | 50.00 | 12.50 |
| 6) | 2250-00-102-4-03-ಶ್ರವಣ ಬೆಳಗೊಳದಲ್ಲಿರುವ ಪ್ರಾಕೃತ ಅಧ್ಯಯನ ಮತ್ತು ಸಂಶೋಧನಾ ಸಂಸ್ಥೆ ಧನಸಹಾಯ-(103)-ಸಹಾಯಾನುದಾನ- | 60.00 | 15.00 |
| 7) | 2075-00-101-1-01-(100) ಇನಾಂ ರದ್ದಿಯಾತಿ ನಿಯಮದ ಮೇರೆಗೆ ಮತೀಯ ಮತ್ತು ಧರ್ಮಾದಾಯ ಸಂಸ್ಥೆಗಳಿಗೆ ನೀಡುವ ಮೊಬಲಗು-ತಸ್ತೀಕ್ ಭತ್ಯೆ | 13462.00 | 3365.50 |
| 8) | 2506-00-101-4-01-ಇನಾಂ ಅಲ್ಲದ ಭೂಮಿಗಳಿಗೆ ಪರಿಹಾರ 103- ವರ್ಷಾಸನ ಸಹಾಯಾನುದಾನ ಸಾಮಾನ್ಯ | 1630.00 | 407.50 |
| | ಒಟ್ಟು | **18302.00** | **4575.50** |

ಮೇಲೆ ಓದಲಾದ ಕ್ರಮ ಸಂಖ್ಯೆ:2ರಲ್ಲಿನ ಆರ್ಥಿಕ ಇಲಾಖೆಯ ಆದೇಶದಲ್ಲಿ 2021-22ನೇ ಸಾಲಿಗೆ ಸಂಬಂಧಿಸಿದಂತೆ ಒಂದು ಆರ್ಥಿಕ ವರ್ಷದಲ್ಲಿ ಮುಂದುವರೆದ ಅಥವಾ ಹೊಸ ಯೋಜನೆಗಳೆಂದು ಅನುಮೋದನೆಗೊಂಡಿರುವ ಯೋಜನೆಗಳಿಗೆ ಮಾತ್ರ ನಾಲ್ಕನೇ ಕಂತಿನ ಹಣ ಬಿಡುಗಡೆಗೆ ಇಲಾಖಾ ಕಾರ್ಯದರ್ಶಿ/ ಪ್ರಧಾನ ಕಾರ್ಯದರ್ಶಿಯವರಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 68 ಮುಅಬಿ 2021**
**ಬೆಂಗಳೂರು, ದಿನಾಂಕ: 18ನೇ ಜನವರಿ, 2022**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2021-22ನೇ ಸಾಲಿನ ಆಯವ್ಯಯದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ಈ ಕೆಳಕಂಡ ಯೋಜನೆಗಳಡಿ ಒದಗಿಸಲಾದ ಅನುದಾನದಲ್ಲಿ ಅವುಗಳ ಮುಂದೆ ನಮೂದಿಸಿರುವಂತೆ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನವನ್ನು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಲೆಕ್ಕ ಶೀರ್ಷಿಕೆ | 2021-22ನೇ ಸಾಲಿನ ಆಯವ್ಯಯ ಹಂಚಿಕೆ | ಬಿಡುಗಡೆಯಾಗ ಬೇಕಾಗಿರುವ ಮೊತ್ತ (3/4 ಭಾಗ) |
|---|---|---|---|
| 1) | 2250-00-103-5-09-ಆರಾಧನಾ-059-ಇತರೆ ಖರ್ಚು | 740.00 | 185.00 |
| 2) | 2250-00-103-5-09-422-ಪರಿಶಿಷ್ಟ ಜಾತಿ ಉಪಯೋಜನೆ | 1183.00 | 295.75 |
| 3) | 2250-00-103-5-09-423-ಗಿರಿಜನ ಉಪ ಯೋಜನೆ | 177.00 | 44.25 |
| 4) | 2250-00-103-5-08-ಮಾನಸ ಸರೋವರ ಭಕ್ತಾಧಿಗಳಿಗೆ ನೆರವು-100-ಧನ ಸಹಾಯ/ ಪರಿಹಾರ | 1000.00 | 250.00 |
| 5) | 2250-00-103-5-06-ಯಡಿಯೂರು ಅಭಿವೃದ್ಧಿ-103 ಸಹಾಯಾನುದಾನ | 50.00 | 12.50 |
| 6) | 2250-00-102-4-03-ಶ್ರವಣ ಬೆಳಗೊಳದಲ್ಲಿರುವ ಪ್ರಾಕೃತ ಅಧ್ಯಯನ ಮತ್ತು ಸಂಶೋಧನಾ ಸಂಸ್ಥೆ ಧನಸಹಾಯ-(103)-ಸಹಾಯಾನುದಾನ- | 60.00 | 15.00 |
| 7) | 2075-00-101-1-01-(100) ಇನಾಂ ರದ್ದಿಯಾತಿ ನಿಯಮದ ಮೇರೆಗೆ ಮಠೀಯ ಮತ್ತು ಧರ್ಮಾದಾಯ ಸಂಸ್ಥೆಗಳಿಗೆ ನೀಡುವ ಮೊಬಲಗು-ತಸ್ಥೀಕ್ ಭತ್ಯೆ | 13462.00 | 3365.50 |
| 8) | 2506-00-101-4-01-ಇನಾಂ ಅಲ್ಲದ ಭೂಮಿಗಳಿಗೆ ಪರಿಹಾರ 103- ವರ್ಷಾಸನ ಸಹಾಯಾನುದಾನ ಸಾಮಾನ್ಯ | 1630.00 | 407.50 |
| | ಒಟ್ಟು | 18302.00 | 4575.50 |

**ಷ ರ ತ್ತು ಗ ಳು**

(ಅ) ಆರಾಧನ, ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಗಳಡಿ ಒದಗಿಸಲಾದ ಅನುದಾನವನ್ನು ಆಯಾಯಾ ಯೋಜನೆಗಳ ಮಾರ್ಗಸೂಚಿಯನ್ವಯ ಕಾಮಗಾರಿ ಕೈಗೊಳ್ಳತಕ್ಕದ್ದು;

(ಆ) ಆರಾಧನ, ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಗಳಡಿ ಒದಗಿಸುವ ಅನುದಾನವನ್ನು ಆಯಾಯ ಜಿಲ್ಲಾಧಿಕಾರಿಗಳು ಸಂಬಂಧಪಟ್ಟ ಸಮಿತಿಗೆ ಕಳುಹಿಸತಕ್ಕದ್ದು; ಆಯಾಯಾ ಸಮಿತಿಯ ಯೋಜನೆಯ ಮಾರ್ಗಸೂಚಿಯನ್ವಯ ನಿಯಮಾನುಸಾರ ಕಾಮಗಾರಿ ಕೈಗೊಳ್ಳತಕ್ಕದ್ದು;

(ಇ) ಧಾರ್ಮಿಕ ದತ್ತಿ ಇಲಾಖೆಯ ಯೋಜನೆಗಳಡಿ ಒದಗಿಸಲಾದ ಅನುದಾನದಲ್ಲಿ ನಾಲ್ಕು ಕಂತುಗಳಲ್ಲಿ ಇದು ನಾಲ್ಕನೇ ಕಂತು ಎಂದು ಪರಿಗಣಿಸಿ, ಯೋಜನೆಯ ಉದ್ದೇಶಕ್ಕಾಗಿ ಮಾತ್ರ ಹಂಚಿಕೆ ಮಾಡತಕ್ಕದ್ದು.

(ಈ) ಕೈಲಾಸ ಮಾನಸ ಸರೋವರ ಯಾತ್ರೆ ಯೋಜನೆ ಅಡಿ ಬಿಡುಗಡೆ ಮಾಡಲಾದ ಅನುದಾನವನ್ನು ಅರ್ಹ ಯಾತ್ರಾರ್ಥಿಗಳಿಗೆ ವಿತರಿಸತಕ್ಕದ್ದು. ಹಾಗೂ ನಿರ್ದಿಷ್ಟ ಸಮಯದೊಳಗೆ ಅರ್ಜಿ ಸಲ್ಲಿಸಿದವರಿಗೆ ಮಾತ್ರ ಸಹಾಯ ಧನ ನೀಡತಕ್ಕದ್ದು.

(ಉ) ಕೋವಿಡ್-19 ವೈರಸ್ ಸೋಂಕಿನ ಸಂಕಷ್ಟದ ಹಿನ್ನೆಲೆಯಲ್ಲಿ ವರ್ಷಾಸನ/ತಸ್ತೀಕ್ ಮೊತ್ತವನ್ನು ಸಂಬಂಧಪಟ್ಟ ಸಂಸ್ಥೆ/ದೇವಾಲಯಗಳಿಗೆ ಯಾವುದೇ ವಿಳಂಬಕ್ಕೆ ಅವಕಾಶ ಕೊಡದೆ ತುರ್ತಾಗಿ ಸಂಬಂಧಪಟ್ಟ ತಹಶೀಲ್ದಾರರು ಅನುದಾನವನ್ನು ಬಿಡುಗಡೆಗೊಳಿಸತಕ್ಕದ್ದು.

(ಊ) ಬಿಡುಗಡೆ ಮಾಡಲಾದ ಅನುದಾನವನ್ನು ನಿಗಧಿತ ಉದ್ದೇಶಕ್ಕೆ ಬಳಸಿಕೊಂಡಿರುವ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು,

(ಋ) ಅವಲೋಕನ ತಂತ್ರಾಂಶದಲ್ಲಿ Pendency report ನಲ್ಲಿ DDO Wise Village Scheme mapping ಅನ್ನು ಕಡ್ಡಾಯವಾಗಿ Update ಮಾಡತಕ್ಕದ್ದು,

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಮೇಲ್ಕಂಡ ಯೋಜನೆಗಳಡಿ ಬಿಡುಗಡೆ ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಡಿ.ಡಿ.ಓ ಸಂಕೇತಕ್ಕೆ ಅಪ್‌ಲೋಡ್ ಮಾಡುವುದು. ಜಿಲ್ಲಾಧಿಕಾರಿಗಳು ಸದರಿ ಯೋಜನೆಗಳಿಗೆ ಬಿಡುಗಡೆಯಾದ ಅನುದಾನವನ್ನು ಖಜಾನೆ-2 ಮುಖಾಂತರ ಆಯಾಯಾ ಯೋಜನೆಗಳ ಮಾರ್ಗಸೂಚಿಗಳನ್ವಯ ನಿಯಮಾನುಸಾರ ಪರಿಶೀಲಿಸಿ, ಖಜಾನೆಯಿಂದ ಸೆಳೆದು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ:ಆಇ 02 ಬಿಪಿಇ 2021 ದಿನಾಂಕ:01-04-2021ರ ಸಹಮತದೊಂದಿಗೆ ಹೊರಡಿಸಿದೆ.

ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2021 ದಿನಾಂಕ:31.12.2021ರಲ್ಲಿ ಇಲಾಖಾ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

M. L. Varalakshmi
(ಎಂ.ಎಲ್.ವರಲಕ್ಷ್ಮೀ) 8/1/22
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಧಾರ್ಮಿಕ ದತ್ತಿ)

**ಇವರಿಗೆ,**

(1) ಪ್ರಧಾನ ಮಹಾಲೇಖಪಾಲರು, (ಜಿ & ಎಸ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ', ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು – 560001

(2) ಪ್ರಧಾನ ಮಹಾಲೇಖಪಾಲರು (ಇ & ಆರ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ' ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು – 560001

(3) ಪ್ರಧಾನ ಮಹಾಲೇಖಪಾಲರು, (ಎ& ಇ)ರವರ ಕಾರ್ಯದರ್ಶಿ, ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು - 560001.

(4) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.

(5) ಎಲ್ಲಾ ಜಿಲ್ಲಾಧಿಕಾರಿಗಳಿಗೆ - ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ.

(6) ಎಲ್ಲಾ ತಹಶೀಲ್ದಾರ್‌ಗಳು - ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ.

(7) ಕಾರ್ಯನಿರ್ವಾಹಕ ಅಧಿಕಾರಿ, ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋದನಾ ಸಂಸ್ಥೆ, ಶ್ರವಣಬೆಳಗೊಳ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ.

(8) ಕಾರ್ಯನಿರ್ವಾಹಕ ಅಧಿಕಾರಿ, ಯಡಿಯೂರು ಶ್ರೀ ಸಿದ್ಧಲಿಂಗೇಶ್ವರ ದೇವಾಲಯ, ಯಡಿಯೂರು, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ.

ಪ್ರತಿ:-

(1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಆಪ್ತ ಕಾರ್ಯದರ್ಶಿ.

(2) ಸರ್ಕಾರದ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ, ಯು.ಪಿ.ಓ.ಆರ್ & ಧಾರ್ಮಿಕ ದತ್ತಿ) ಇವರ ಆಪ್ತ ಕಾರ್ಯದರ್ಶಿ.

(3) ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿ.





# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:-** 2021-22ನೇ ಸಾಲಿನಲ್ಲಿ ರಾಜ್ಯದ ವಿವಿಧ ಜಿಲ್ಲೆಗಳ ಧಾರ್ಮಿಕ ಸಂಸ್ಥೆಗಳ ದುರಸ್ಥಿ/ ಜೀರ್ಣೋದ್ಧಾರ/ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಅನುದಾನ ಬಿಡುಗಡೆ ಮಾಡುವ ಕುರಿತು.

* * * * *

**ಪ್ರಸ್ತಾವನೆ:-**

2021-22ನೇ ಸಾಲಿನಲ್ಲಿ ಆಯವ್ಯಯದಲ್ಲಿ ರಾಜ್ಯದ ವಿವಿಧ ಜಿಲ್ಲೆಗಳ ಮಾನ್ಯ ಮುಖ್ಯಮಂತ್ರಿಯವರು ಸೂಚಿಸಿರುವ ದೇವಸ್ಥಾನಗಳು ಮತ್ತು ಮಾನ್ಯ ಸಚಿವರು, ಶಾಸಕರು, ಸಂಸದರು, ಗಣ್ಯವ್ಯಕ್ತಿಗಳು ಮತ್ತು ಸಾರ್ವಜನಿಕರು ಅನುದಾನ ಮಂಜೂರು ಮಾಡುವಂತೆ ಕೋರಿರುವ ದೇವಸ್ಥಾನ/ಮಠ/ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿ/ದುರಸ್ಥಿ/ಜೀರ್ಣೋದ್ಧಾರ ಕಾಮಗಾರಿಗಳಿಗೆ ಅನುದಾನ ಮಂಜೂರು ಮಾಡುವಂತೆ ಕೋರಿರುವ ಒಟ್ಟು 131 ಧಾರ್ಮಿಕ ಸಂಸ್ಥೆಗಳಿಗೆ ಅವುಗಳ ಮುಂದೆ ನಮೂದಿಸಿರುವಂತೆ ಒಟ್ಟು ರೂ.919.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 4059-80-051-0-52 ಧಾರ್ಮಿಕ ಸ್ಥಳಗಳಲ್ಲಿ ಮೂಲಭೂತ ಸೌಕರ್ಯ (386) ಇದರಡಿಯಲ್ಲಿ ಒದಗಿಸಿರುವ ಅನುದಾನದಿಂದ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 23 ಮುಅಬಿ 2022,**
**ಬೆಂಗಳೂರು; ದಿನಾಂಕ: 23ನೇ ಮಾರ್ಚ್, 2022**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2021-22ನೇ ಸಾಲಿನ ಆಯವ್ಯಯದಲ್ಲಿ, ರಾಜ್ಯದ ವಿವಿಧ ಜಿಲ್ಲೆಗಳ ಒಟ್ಟು 131 ದೇವಸ್ಥಾನ/ಮಠ/ಧಾರ್ಮಿಕ ಸಂಸ್ಥೆಗಳ ದುರಸ್ಥಿ/ ಜೀರ್ಣೋದ್ಧಾರ/ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಅನುಬಂಧದಲ್ಲಿರುವಂತೆ ಅವುಗಳ ಮುಂದೆ ನಮೂದಿಸಿರುವಂತೆ ಒಟ್ಟು ರೂ.919.00 ಲಕ್ಷಗಳ (ಒಂಬತ್ತು ನೂರ ಹತ್ತೊಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

**-ಷರತ್ತುಗಳು-**

1. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಧಾರ್ಮಿಕ ಸಂಸ್ಥೆಗಳಿಗೆ ಮಂಜೂರು ಮಾಡಲಾದ ಅನುದಾನವನ್ನು ಖಜಾನೆ-2 ಮುಖಾಂತರ ಜಿಲ್ಲಾಧಿಕಾರಿಗಳ ಡಿ.ಡಿ.ಓ ಸಂಕೇತಕ್ಕೆ ಅಪ್‌ಲೋಡ್ ಮಾಡುವುದು;
2. ಆಯಾಯಾ ಜಿಲ್ಲಾಧಿಕಾರಿಗಳು, ಸಂಬಂಧಪಟ್ಟ ತಹಶೀಲ್ದಾರರುಗಳಿಂದ ನಿಯಮಾನುಸಾರ ಪ್ರಸ್ತಾವನೆಯನ್ನು ಪಡೆದು, ಮಂಜೂರಾತಿ ನೀಡಿ, ಖಜಾನೆಯಿಂದ ಅನುದಾನವನ್ನು ಡ್ರಾ ಮಾಡಿ ಸಂಬಂಧಿಸಿದ ಸಂಸ್ಥೆಗೆ ತಹಶೀಲ್ದಾರ್ ಮೂಲಕ ಬಿಡುಗಡೆ ಮಾಡತಕ್ಕದ್ದು;
3. ಅನುದಾನ ಬಿಡುಗಡೆ ಮಾಡಿರುವ ಸಂಸ್ಥೆಯು ನಿಯಮಾನುಸಾರ ನೀಡಬಹುದಾದ ಮೊತ್ತವನ್ನು 'ಮುಂಗಡ ರಶೀದಿ' (Advance Receipt) ಪಡೆದು ಸಾದಿಲ್ವಾರು ಬಿಲ್ಲಿಗೆ ಲಗತ್ತಿಸಿ ಖಜಾನೆಯಿಂದ ಸಂಸ್ಥೆಯ ಹೆಸರಿಗೆ ಚೆಕ್ಕು ಪಡೆದು ಪಾವತಿಸುವುದು;
4. ಉದ್ದೇಶಿತ ಕಾಮಗಾರಿಗಳ ಅಂದಾಜುಪಟ್ಟಿಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಮತ್ತು ಆಡಳಿತಾತ್ಮಕ ಅನುಮೋದನೆ ಪಡೆಯತಕ್ಕದ್ದು;
5. ಮಂಜೂರು ಮಾಡಲಾದ ಅನುದಾನದ ವಿವರಗಳನ್ನು ಒಳಗೊಂಡ ದಾಖಲೆ ವೀಕ್ಷಣಾ ಪುಸ್ತಕ (Watch Register) ನಿರ್ವಹಿಸಿ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ ಇವರು ಪೂರ್ಣ ವಿವರ ಪಟ್ಟಿ ಮಾಡಿ ವರದಿಯನ್ನು ಪ್ರತಿ ತ್ರೈಮಾಸಿಕಕ್ಕೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು;
6. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಹಾಗೂ ಅದರಡಿಯಲ್ಲಿ ರಚಿಸಿರುವ ನಿಯಮಗಳನ್ನು ಕಡ್ಡಾಯವಾಗಿ ಅನುಸರಿಸತಕ್ಕದ್ದು;

. . . 2

7. ಅನುದಾನ ಪಡೆದ ಧಾರ್ಮಿಕ ಸಂಸ್ಥೆಯು ದೇವಾಲಯದ ಆವರಣದಲ್ಲಿ ಕಡ್ಡಾಯವಾಗಿ ಎರಡು ಬೇವಿನ ಸಸಿಗಳನ್ನು ನೆಟ್ಟು ಬೆಳೆಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 766 ವೆಚ್ಚ-7/ 2021, ದಿನಾಂಕ:19.03.2022ರ ಸಹಮತಿಯನ್ವಯ ಹೊರಡಿಸಲಾಗಿದೆ.

ಆ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 4059-80-051-0-52 ಧಾರ್ಮಿಕ ಸ್ಥಳಗಳಲ್ಲಿ ಮೂಲಭೂತ ಸೌಕರ್ಯ (386) ಇದರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

M.L.Varalakshmi
**(ಎಂ.ಎಲ್.ವರಲಕ್ಷ್ಮಿ)** 23/3/22
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಧಾರ್ಮಿಕ ದತ್ತಿ)

**ಇವರಿಗೆ:**

1. ಪ್ರಧಾನ ಮಹಾಲೇಖಪಾಲರು, (ಜಿ & ಎಸ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಇ & ಆರ್.ಎಸ್.ಎ.)ರವರ ಕಾರ್ಯದರ್ಶಿ, ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ' ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು, (ಎ&ಇ)ರವರ ಕಾರ್ಯದರ್ಶಿ, ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ: 5329, ಬೆಂಗಳೂರು.
4. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
5. ಸಂಬಂಧಪಟ್ಟ ಜಿಲ್ಲಾಧಿಕಾರಿಗಳು (ಧಾರ್ಮಿಕ ದತ್ತಿ ಆಯುಕ್ತರ ಮುಖಾಂತರ).

**ಪ್ರತಿ:-**

1. ಧಾರ್ಮಿಕ ದತ್ತಿ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಆಪ್ತ ಕಾರ್ಯದರ್ಶಿ.
3. ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ, ಯು.ಪಿ.ಓ.ಆರ್. & ಧಾರ್ಮಿಕ ದತ್ತಿ) ಇವರ ಆಪ್ತ ಕಾರ್ಯದರ್ಶಿ.
4. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 23 ಮುಅಬಿ 2022**
**ಬೆಂಗಳೂರು, ದಿನಾಂಕ: 23ನೇ ಮಾರ್ಚ್, 2022**
**ಅನುಬಂಧ**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ದೇವಸ್ಥಾನಗಳ ವಿವರ | ಮಂಜೂರಾತಿ ನೀಡಿರುವ ಅನುದಾನ |
|---|---|---|
| 1. | ಶ್ರೀ ಭೀಮನಕೊಲ್ಲಿ ಮಹದೇಶ್ವರ ಸ್ವಾಮಿ ದೇವಸ್ಥಾನ ಸಮಿತಿ, ಭೀಮನಕೊಲ್ಲಿ ಗ್ರಾಮ, ಕಳಸೂರು ಅಂಚೆ, ಹೆಚ್.ಡಿ.ಕೋಟೆ ತಾಲೂಕು, ಮೈಸೂರು ಜಿಲ್ಲೆ. | 25.00 |
| 2. | ಶ್ರೀ ರಾಮಲಿಂಗೇಶ್ವರ ದೇವಸ್ಥಾನ, ಬ್ಯಾಹಟ್ಟಿ ಗ್ರಾಮ, ಹುಬ್ಬಳ್ಳಿ ತಾಲೂಕು, ಧಾರವಾಡ ಜಿಲ್ಲೆ. | 5.00 |
| 3. | ಶ್ರೀ ರಾಮಲಿಂಗೇಶ್ವರ ದೇವಸ್ಥಾನ, ಮಂಟೂರ ಗ್ರಾಮ, ಹುಬ್ಬಳ್ಳಿ ತಾಲೂಕು, ಧಾರವಾಡ ಜಿಲ್ಲೆ. | 5.00 |
| 4. | ಶ್ರೀ ವೀರಭದ್ರೇಶ್ವರ ದೇವಸ್ಥಾನ, ಹೆಬಸೂರ ಗ್ರಾಮ, ಹುಬ್ಬಳ್ಳಿ ತಾಲೂಕು, ಧಾರವಾಡ ಜಿಲ್ಲೆ. | 5.00 |
| 5. | ಶ್ರೀ ಗ್ರಾಮದೇವತೆ ದೇವಸ್ಥಾನ, ಆಯಟ್ಟಿ ಗ್ರಾಮ, ನವಲಗುಂದ ತಾಲೂಕು, ಧಾರವಾಡ ಜಿಲ್ಲೆ. | 5.00 |
| 6. | ಶ್ರೀ ಗ್ರಾಮದೇವತೆ ದೇವಸ್ಥಾನ, ಹನಸಿ ಗ್ರಾಮ, ನವಲಗುಂದ ತಾಲೂಕು, ಧಾರವಾಡ ಜಿಲ್ಲೆ. | 5.00 |
| 7. | ಶ್ರೀ ಕಲ್ಮೇಶ್ವರ ದೇವಸ್ಥಾನ, ಶಲವಡಿ ಗ್ರಾಮ, ನವಲಗುಂದ ತಾಲೂಕು, ಧಾರವಾಡ ಜಿಲ್ಲೆ. | 5.00 |
| 8. | ಶ್ರೀ ಗ್ರಾಮದೇವತೆ ದೇವಸ್ಥಾನ, ಶಿರೂರ ಗ್ರಾಮ, ನವಲಗುಂದ ತಾಲೂಕು, ಧಾರವಾಡ ಜಿಲ್ಲೆ. | 5.00 |
| 9. | ಶ್ರೀ ಸೋಮಲಿಂಗೇಶ್ವರ ದೇವಸ್ಥಾನ, ಶಾನವಾಡ ಗ್ರಾಮ, ನವಲಗುಂದ ತಾಲೂಕು, ಧಾರವಾಡ ಜಿಲ್ಲೆ. | 5.00 |
| 10. | ಶ್ರೀ ಬಸವೇಶ್ವರ ದೇವಸ್ಥಾನ, ತಿರ್ಲಾಪೂರ ಗ್ರಾಮ, ನವಲಗುಂದ ತಾಲೂಕು, ಧಾರವಾಡ ಜಿಲ್ಲೆ. | 5.00 |
| 11. | ಶ್ರೀ ಮೈಲಾರಲಿಂಗೇಶ್ವರ ದೇವಸ್ಥಾನ, ಬ್ಯಾಹಟ್ಟಿ ಗ್ರಾಮ, ಹುಬ್ಬಳ್ಳಿ ತಾಲೂಕು, ಧಾರವಾಡ ಜಿಲ್ಲೆ. | 5.00 |
| 12. | ಶ್ರೀ ಗ್ರಾಮದೇವತೆ ದೇವಸ್ಥಾನ, ಕಳಸ ಗ್ರಾಮ, ಕುಂದಗೋಳ ತಾಲೂಕು, ಧಾರವಾಡ ಜಿಲ್ಲೆ. | 5.00 |
| 13. | ಶ್ರೀ ಶೈಲೇಶ್ವರ ಮಠ, ಬಿ. ಹುಲಿಕಟ್ಟಿ ಗ್ರಾಮ, ಕಲಘಟಗಿ ತಾಲೂಕು, ಧಾರವಾಡ ಜಿಲ್ಲೆ. | 5.00 |
| 14. | ಶ್ರೀ ರಾಮಲಿಂಗೇಶ್ವರ ದೇವಸ್ಥಾನ, ದೇವರಹುಬ್ಬಳ್ಳಿ ಗ್ರಾಮ, ಧಾರವಾಡ ತಾಲೂಕು, ಧಾರವಾಡ ಜಿಲ್ಲೆ. | 5.00 |
| 15. | ಶ್ರೀ ಶಿವಾನಂದ ಮಠ, ಕುರುಬಗಟ್ಟಿ ಗ್ರಾಮ, ಧಾರವಾಡ ತಾಲೂಕು, ಧಾರವಾಡ ಜಿಲ್ಲೆ. | 5.00 |
| 16. | ಶ್ರೀ ಉಡಚಮ್ಮಾ ದೇವಸ್ಥಾನ, ಕೋಟೂರ ಗ್ರಾಮ, ಧಾರವಾಡ ತಾಲೂಕು, ಧಾರವಾಡ ಜಿಲ್ಲೆ. | 5.00 |
| 17. | ಶ್ರೀ ಗಿರಿಮೇಷನ ಕೆರೆ ಶ್ರೀ ಆಂಜನೇಯ ದೇವಸ್ಥಾನ, ಗುಂತಗುಳಾ ಗ್ರಾಮ, ಲಿಂಗಸಗೂರು ತಾಲೂಕು, ರಾಯಚೂರು ಜಿಲ್ಲೆ. | 15.00 |
| 18. | ಶ್ರೀ ಕುಪ್ಪಿ ಭೀಮರಾಯ ದೇವಸ್ಥಾನ, ಕಸಬಾ ಲಿಂಗಸಗೂರು ಗ್ರಾಮ, ಲಿಂಗಸಗೂರು ತಾಲೂಕು, ರಾಯಚೂರು ಜಿಲ್ಲೆ. | 10.00 |
| 19. | ಶ್ರೀ ಮಾರುತಿ ದೇವಸ್ಥಾನ, ಸೂಗರಾಳ ಗ್ರಾಮ, ದೇವದುರ್ಗ ತಾಲೂಕು, ರಾಯಚೂರು ಜಿಲ್ಲೆ. | 10.00 |
| 20 | ಶ್ರೀ ತ್ರಯಂಬಕೇಶ್ವರ ದೇವಸ್ಥಾನ, ಕವಿತಾಳ ಗ್ರಾಮ, ಸಿರವಾರ ತಾಲೂಕು, ರಾಯಚೂರು ಜಿಲ್ಲೆ. | 5.00 |



H.L. Varalakshmi

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
|---|---|---|---|---|---|---|---|---|---|---|---|---|---|---|---|
| 76 | | 2870424 | SANGANABASAPPAGOUDA PATIL | OTH | GroupB | Assistant Engineer-Grade-I | 10-11-63 | 16-11-15 | ಜ.ಸಂ.ಇ-42/ಸೇಸಕಿ-2015 ದಿನಾಂಕ: 20-10-2015 | WRD-ಜ.ಸಂ.ಇ-42/ಸೇಸಕಿ-2015 ದಿನಾಂಕ: 20-10-2015 | ಜಸಾ/151/ಇಎಸ್‌ಎಲ್/2017 ದಿನಾಂಕ: 01-06-2018 | Others | 8867186860 | 02-07-20 05:56 | RDPR |
| 77 | | 1775970 | MOHMED SHAFI | PWD | GroupB | Assistant Engineer-Grade-I | 08-05-68 | 30-06-99 | ನೀಯೋವ/ಮುಇಗ್ರಾ/ಸಿ-10/99-2000/1072 DATE 17/06/1999 | PWD-ನೀಯೋವ/ಮುಇಗ್ರಾ/ಸಿ-10/99-2000/1072 | | Others | 7022504468 | 22-06-20 08:34 | RDPR |
| 78 | | 1124567 | A.Kumar | PWD | GroupB | Assistant Engineer-Division-I | 09-11-63 | - | - | - | - | - | 9880468945 | - | PRED |
| 79 | 2693/6008 | 852839 | C Ashok Reddy | PWD | GroupB | Assistant Engineer-Division-I | 12-06-62 | - | - | 14/9/87 | 11/9/87 | - | - | - | PRED |
| 80 | | 2303282 | Mallikarjun | PWD | GroupB | Assistant Engineer-Division-I | 25-08-85 | - | St No 63 | - | - | - | 9686335222 | - | PRED |
| 81 | 5693 | 2322270 | B K PRASAD | PWD | GroupB | Assistant Engineer-Division-I | 25-02-74 | - | - | - | - | - | 9008242326 | - | PRED |
| 82 | 3557/6548 old | 1278334 | B K PRASANNA KUMAR | PWD | GroupB | Assistant Engineer-Division-I | 03-07-61 | - | - | - | - | - | 9901301354 | - | PRED |
| 83 | | 2096495 | Basavaraju | PWD | GroupB | Assistant Engineer-Division-I | 25-05-88 | - | 2007 : JE | - | - | - | 9972730221 | - | PRED |
| 84 | 3678A | 1571837 | VAMAN JADHAV | PWD | GroupB | Assistant Engineer-Division-I | 01-03-62 | - | - | - | - | - | 9880284867 | - | PRED |
| 85 | 37849 | 1838614 | CHANNAVEERAYYA B HIREMATH | PWD | GroupB | Assistant Engineer-Division-I | 15-04-67 | - | - | - | - | - | 9844293626 | - | PRED |
| 86 | 5901A | 1453221 | Kumaraswamy K M | PWD | GroupB | Assistant Engineer-Division-I | 07-07-71 | - | - | - | - | - | 9844877365 | - | RWS |



ಕರ್ನಾಟಕ ಸರ್ಕಾರ
(ಲೋಕೋಪಯೋಗಿ ಇಲಾಖೆ)

ಸಂಖ್ಯೆ:ಸಿಬಿಎಸ್:383:ಸ.ಇಂ.2:ಇಲಾಖಾಬೇರ್ಪಡೆ:ಇಎಸ್‌ಸಿ:19-20 (ಭಾ-1)

ಮುಖ್ಯ ಇಂಜಿನಿಯರ್‌ರವರ ಕಛೇರಿ
ಸಂಪರ್ಕ ಮತ್ತು ಕಟ್ಟಡಗಳು (ದ),
ಬೆಂಗಳೂರು, ದಿನಾಂಕ
20 OCT 2020

## ಅಧಿಸೂಚನೆ

### (ಸಹಾಯಕ ಇಂಜಿನಿಯರ್ (ವಿಭಾಗ-2) ವೃಂದ)

ಲೋಕೋಪಯೋಗಿ ಇಲಾಖೆ, ಜಲ ಸಂಪನ್ಮೂಲ ಇಲಾಖೆ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳು 1989 ರ ಪೂರ್ವದಲ್ಲಿ ಒಂದೇ ಇಲಾಖೆಯಾಗಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ವಿಶ್ವಬ್ಯಾಂಕ್‌ರಡಿಯಲ್ಲಿ ನೀರಾವರಿ ಯೋಜನೆಗಳಿಗೆ ನೀಡಲಾದ ಅನುದಾನಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಉದ್ದೇಶದಿಂದ ನೀರಾವರಿ ಇಲಾಖೆಯು ಪ್ರತ್ಯೇಕ ಬಜೆಟ್ ಹೊಂದಿ ನೀರಾವರಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಜಲಸಂಪನ್ಮೂಲ ಇಲಾಖೆಯನ್ನು 1986 ರಲ್ಲೇ ಲೋಕೋಪಯೋಗಿ ಇಲಾಖೆಯಿಂದ ಪ್ರತ್ಯೇಕಗೊಳಿಸಿದ್ದು, ಆ ಇಲಾಖೆಗೆ ಸಂಬಂಧಿಸಿದಂತೆ ಪ್ರತ್ಯೇಕ ವೃಂದ ಮತ್ತು ನೇಮಕಾತಿ ನಿಯಮಾವಳಿಯನ್ನು 2014 ರಲ್ಲಿ ರಚಿಸಲಾಗಿರುತ್ತದೆ. ಅದೇ ರೀತಿ 2008 ರಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯೂ ಸಹ ಪ್ರತ್ಯೇಕ ವೃಂದ ಮತ್ತು ನೇಮಕಾತಿ ನಿಯಮಾವಳಿಯನ್ನು ರಚಿಸಿಕೊಂಡಿರುತ್ತದೆ.

ಆದರೆ, ಲೋಕೋಪಯೋಗಿ ಇಲಾಖೆ, ಜಲ ಸಂಪನ್ಮೂಲ ಇಲಾಖೆ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳು ಪ್ರತ್ಯೇಕವಾಗಿ ವೃಂದ ಮತ್ತು ನೇಮಕಾತಿ ನಿಯಮಾವಳಿಗಳನ್ನು ರಚಿಸಿಕೊಂಡಿದ್ದರೂ ಸಹ ಲೋಕೋಪಯೋಗಿ ಇಲಾಖೆಯು ಈ ಮೂರು ಇಲಾಖೆಗಳ ವೃಂದ ನಿರ್ವಹಣಾ ಪ್ರಾಧಿಕಾರವಾಗಿ ಮೂರು ಇಲಾಖೆಗಳ ಹುದ್ದೆಗಳಿಗೆ ನೇಮಕಾತಿ ಹೊಂದಿದ್ದ ಎಲ್ಲಾ ಅಧಿಕಾರಿ / ಸಿಬ್ಬಂದಿಗಳು ಲೋಕೋಪಯೋಗಿ ಇಲಾಖೆಯಲ್ಲಿಯೇ ಉಳಿದಿದ್ದು ಭೌತಿಕವಾಗಿ ಇಂಜಿನಿಯರ್‌ಗಳನ್ನಾಗಲಿ ಅಥವಾ ಸಿಬ್ಬಂದಿಯವರುಗಳನ್ನಾಗಲಿ ಇಲಾಖೆಯ ವೃಂದ ಬಲಕ್ಕೆ ಅನುಗುಣವಾಗಿ ಆಯಾಯಾ ಇಲಾಖೆಗಳಿಗೆ ಸಮಾನಾಂತರವಾಗಿ ಬೇರ್ಪಡೆ ಮಾಡಿರುವುದಿಲ್ಲ.

ಮೂರೂ ಇಲಾಖೆಗಳಿಗೆ ಸಂಬಂಧಿಸಿದಂತೆ ತಾಂತ್ರಿಕ ವರ್ಗದ ಇಂಜಿನಿಯರ್‌ಗಳು ಗ್ರೂಪ್ ಬಿ ಸಹಾಯಕ ಇಂಜಿನಿಯರ್, ಗ್ರೂಪ್ ಸಿ ಕಿರಿಯ ಇಂಜಿನಿಯರ್, ಮತ್ತು ತಾಂತ್ರಿಕೇತರ ಪ್ರ.ದ.ಸ. ಶೀಘ್ರಲಿಪಿಗಾರರರು, ದ್ವಿ.ದ.ಸ. ಹಾಗೂ ಗ್ರೂಪ್ ಡಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಈ ಹಿಂದೆ ಲೋಕೋಪಯೋಗಿ ಇಲಾಖೆಯ ಮುಖಾಂತರವೇ ಭರ್ತಿ ಮಾಡಲಾಗಿರುತ್ತದೆ ಹಾಗೂ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದಿಂದ ಮುಖ್ಯ ಇಂಜಿನಿಯರ್ ವೃಂದದವರೆಗೆ ಸರ್ಕಾರದ ಲೋಕೋಪಯೋಗಿ ಇಲಾಖೆಯಲ್ಲಿ ಮತ್ತು ಗ್ರೂಪ್ ಸಿ ಕಿರಿಯ ಇಂಜಿನಿಯರ್ ಹುದ್ದೆಯಿಂದ ಸ.ಇಂ.2 ಹುದ್ದೆಗೆ ಪ್ರ.ದ.ಸ. ಯಿಂದ ಲೆಕ್ಕ ಅಧೀಕ್ಷಕರು, ಹಾಗೂ

ಅಧೀಕ್ಷಕರ ಹುದ್ದೆಗೆ ದ್ವಿ.ದ.ಸ.ಯಿಂದ ಪ್ರ.ದ.ಸ.ಹುದ್ದೆಗೆ, ಬೆರಳಚ್ಚುಗಾರರಿಂದ ಶೀಘ್ರಲಿಪಿಗಾರರರ ಹುದ್ದೆಗೆ ಮತ್ತು ಗ್ರೂಪ್ ಡಿ ಯಿಂದ ದ್ವಿ.ದ.ಸ.ಹುದ್ದೆಗಳಿಗೆ ಪದೋನ್ನತಿ ಹಾಗೂ ಕೆಲವು ಗ್ರೂಪ್ ಸಿ ವೃಂದದ ಹುದ್ದೆಗಳಿಗೆ ವೃಂದ ಬದಲಾವಣೆ ಮೂಲಕ ಲೋಕೋಪಯೋಗಿ ಇಲಾಖೆಯಲ್ಲಿನ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಭರ್ತಿ ಮಾಡಲು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ)ಬೆಂಗಳೂರು ರವರೇ ನೇಮಕಾತಿ ಪ್ರಾಧಿಕಾರವಾಗಿದ್ದು, ಅದರಂತೆ ಲೋಕೋಪಯೋಗಿ ಇಲಾಖೆಯಲ್ಲಿ ನಿರ್ವಹಣೆ ಮಾಡಲಾದ ಜೇಷ್ಠತಾ ಪಟ್ಟಿಯ ಅನುಸಾರವೇ ಪದೋನ್ನತಿ ಮೂಲಕ ಲೋಕೋಪಯೋಗಿ, ಜಲಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿನ ಹುದ್ದೆಗಳನ್ನೂ ಪರಿಗಣಿಸಿ ತುಂಬಲಾಗಿದೆ. ಮುಂದುವರೆದು, ನಗರಾಭಿವೃದ್ಧಿ ಇಲಾಖೆ ಹಾಗೂ ಇತರೆ ಇಲಾಖೆಗಳಿಗೂ ಸಹ ಲೋಕೋಪಯೋಗಿ ಇಲಾಖೆಯ ಮುಖಾಂತರವೇ ಇಂಜಿನಿಯರ್ ಹುದ್ದೆಗಳನ್ನು ನಿಯೋಜನೆ ಮೂಲಕ ಭರ್ತಿ ಮಾಡಲಾಗುತ್ತಿದೆ.

ಸದರಿ ಮೂರು ಇಲಾಖೆಗಳಲ್ಲಿನ ತಾಂತ್ರಿಕ ವರ್ಗ ಹಾಗೂ ತಾಂತ್ರಿಕೇತರ ವರ್ಗದಲ್ಲಿನ ಸಿಬ್ಬಂದಿಗಳನ್ನು ಭೌತಿಕವಾಗಿ ಬೇರ್ಪಡೆ ಮಾಡುವ ಕುರಿತು ಕ್ರಮವಹಿಸಲು ಪ್ರಮುಖವಾಗಿ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯು ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಪ್ರಶ್ನಿತವಾಗಿದ್ದು, ನಂತರದಲ್ಲಿ ಬಿ.ಕೆ. ಪವಿತ್ರ-2 ಪ್ರಕರಣದ ಹಿನ್ನಲೆಯಲ್ಲಿ ಅಂತಿಮ ತೀರ್ಪುಗೊಂಡ ನಂತರ ಇಂಜಿನಿಯರ್‌ಗಳ ವೃಂದದ ಜ್ಯೇಷ್ಠತಾ ಪಟ್ಟಿಗಳನ್ನು ಪ್ರಕಟಿಸಲಾದ ಪರಿಣಾಮವಾಗಿ ಇಲಾಖೆಗಳ ಅಧಿಕಾರಿ / ಸಿಬ್ಬಂದಿಗಳ ಬೇರ್ಪಡೆ ಕುರಿತು ಮಾನ್ಯ ಉಪ ಮುಖ್ಯ ಮಂತ್ರಿಗಳು (ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ) ಇವರ ಅಧ್ಯಕ್ಷತೆಯಲ್ಲಿ ಮಾನ್ಯ ಜಲ ಸಂಪನ್ಮೂಲ ಸಚಿವರ ಹಾಗೂ ಮಾನ್ಯ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆ ಸಚಿವರ ಸಮ್ಮುಖದಲ್ಲಿ ಎಲ್ಲಾ ಇಲಾಖಾ ಮುಖ್ಯಸ್ಥರನ್ನು ಒಳಗೊಂಡಂತೆ ದಿನಾಂಕ: 19.09.2019 ರಂದು ನಡೆದ ಸಭೆಯಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿರುತ್ತದೆ. ಅದರಂತೆ, ಲೋಕೋಪಯೋಗಿ ಇಲಾಖೆಯಲ್ಲಿ ಪ್ರಕಟಿಸಲಾದ ಜೇಷ್ಠತಾ ಪಟ್ಟಿಯಲ್ಲಿನ ಅಂತರ್ ಜ್ಯೇಷ್ಠತೆಯನ್ನು ಕಾಯ್ದುಕೊಳ್ಳುವ ಷರತ್ತಿಗೊಳಪಟ್ಟು ಬೇರ್ಪಡೆ ಪ್ರಕ್ರಿಯೆ ನಡೆಸಲು ಅಭಿಮತ ಪಡೆಯಲು ಹಾಗೂ ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯ ತಜ್ಞರ ಸಮಿತಿಯಲ್ಲಿ ಸಲ್ಲಿಸಿ, ಮುಂದಿನ ಪ್ರಕ್ರಿಯೆಯನ್ನು ಕೈಗೊಳ್ಳಲು ತೀರ್ಮಾನಿಸಲಾಗಿರುತ್ತದೆ.

ಮೇಲಿನಂತೆ, ಜಲ ಸಂಪನ್ಮೂಲ ಇಲಾಖೆಯ ಆದೇಶ ಸಂ. ಆಸಂಇ 06 ಸೇಎಸು 2015 ದಿನಾಂಕ: 25.11.2019 ರಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 16 (ಎ) (ii) ರನ್ವಯ ಜಲ ಸಂಪನ್ಮೂಲ ಇಲಾಖೆಯ ಸೇವೆಯಲ್ಲಿ ಶಾಶ್ವತ ವರ್ಗಾವಣೆ ಮುಖೇನ ನೇಮಕಾತಿ ಮಾಡಲು ಒಂದು ಬಾರಿಗೆ ಮಾತ್ರ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇಲಾಖೆಯ ಅಧಿಕಾರಿ / ನೌಕರರು ತಮ್ಮ ಅಭಿಮತಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಿ, ಕಾರ್ಯಕಾರಿ ಆದೇಶವನ್ನು ಹೊರಡಿಸಲಾಗಿದೆ. ಅದೇ ರೀತಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಸಹಾ ಆದೇಶ ಸಂ. ಗ್ರಾಅಪ 160 ಸೇಶಿಕ 2019 (1) ದಿನಾಂಕ: 16.05.2020 ರಲ್ಲಿ ಸದರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಹಾಗೂ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಗಳಿಗೆ ಪ್ರತ್ಯೇಕವಾಗಿ ಅಭಿಮತಗಳನ್ನು ಸಲ್ಲಿಸಲು ಕಾರ್ಯಕಾರಿ ಆದೇಶವನ್ನು ಹೊರಡಿಸಲಾಗಿದೆ.

7) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಹಾಗೂ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಲ್ಲಿ ಮಂಜೂರಾಗಿ ಖಾಲಿ ಇರುವ ಹುದ್ದೆಗಳಿಗೆ ಅಭಿಮತ / ಇಚ್ಛಾಪತ್ರಗಳನ್ನು ಆಹ್ವಾನಿಸಿದ್ದು, ಅದರನ್ವಯ ಇಚ್ಛಾಪತ್ರ / ಅಭಿಮತ ಸಲ್ಲಿಸಿದ ಅಧಿಕಾರಿ / ಸಿಬ್ಬಂದಿಗಳ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಶಾಶ್ವತವಾಗಿ ನೀಡಲಾಗಿದೆ.

8) ಇದಲ್ಲದೆ ಲೋಕೋಪಯೋಗಿ ಇಲಾಖೆಯಲ್ಲಿ ಅಭಿಮತ /ಇಚ್ಛಾ ಪತ್ರ ಸಲ್ಲಿಸಿದ ಅಧಿಕಾರಿ / ಸಿಬ್ಬಂದಿಗಳ ಸೇವೆಯನ್ನು ಹಾಗೂ ಹೆಚ್ಚುವರಿ ಸಿಬ್ಬಂದಿಗಳನ್ನು ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಎದುರು ವಿಲೀನಗೊಳಿಸಲು ಅವಕಾಶವಿರುವ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ತಿಳಿಸಿರುವುದರಿಂದ, ಈ ರೀತಿ ಶಾಶ್ವತವಾಗಿ ಸೇವೆ ನೀಡಲು ತೀರ್ಮಾನಿಸಿದ್ದು, ಅಂತಹ ಅಧಿಕಾರಿ / ಸಿಬ್ಬಂದಿಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಲಭ್ಯವಿರುವ ಮಂಜೂರಾದ ಖಾಲಿ ಹುದ್ದೆಗಳಿಗೆ ವಿಲೀನಗೊಳಿಸಲು ಸದರಿ ಇಲಾಖೆ ಕ್ರಮ ವಹಿಸುತ್ತದೆ. ಸದರಿ ಕ್ರಮಕ್ಕೆ ಲೋಕೋಪಯೋಗಿ ಇಲಾಖೆಯಲ್ಲಿ ಇಚ್ಛಾಪತ್ರ / ಅಭಿಮತ ಸಲ್ಲಿಸಿದ್ದನ್ನು ಪರಿಗಣಿಸಿ ಶಾಶ್ವತವಾಗಿ ಸೇವೆ ನೀಡುವ ಯಾವುದೇ ಅಧಿಕಾರಿ / ಸಿಬ್ಬಂದಿಗಳು ಆಕ್ಷೇಪಣೆ ಮಾಡತಕ್ಕದ್ದಲ್ಲವೆಂದು ಸ್ಪಷ್ಟಪಡಿಸಿದೆ.

9) ಯಾವುದೇ ಅಭಿಮತ ಸಲ್ಲಿಸದೆ ಇರುವ ಅಧಿಕಾರಿ / ನೌಕರರುಗಳನ್ನು ಅವರುಗಳು ನೇಮಕಾತಿ ಹೊಂದಿದ ಇಲಾಖೆಯಲ್ಲಿಯೇ ಶಾಶ್ವತವಾಗಿ ಮುಂದುವರೆಸಲಾಗಿದೆ.

10) ಸದರಿ ಸಹಾಯಕ ಇಂಜಿನಿಯರ್ (ವಿಭಾಗ-2) ವೃಂದದ ಅಧಿಕಾರಿಗಳು ಶಾಶ್ವತ ವರ್ಗಾವಣೆ ಹೊಂದುವ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳದಲ್ಲಿ ಅವರುಗಳ ವಿರುದ್ಧ ಹೂಡಲಾದ ಯಾವುದೇ ಇಲಾಖಾ ವಿಚಾರಣೆ, ಲೋಕಾಯುಕ್ತ ಪ್ರಕರಣ, ಶಿಸ್ತು ಪ್ರಕರಣ, ಎ.ಸಿ.ಬಿ ಪ್ರಕರಣ ಅಥವಾ ಕ್ರಿಮಿನಲ್ ಪ್ರಕರಣಗಳಲ್ಲಿ ಭಾಗಿಯಾಗಿದ್ದಲ್ಲಿ ಅವುಗಳು ಅಸ್ತಿತ್ವವು ಜಾರಿಯಲ್ಲಿರುತ್ತವೆ, ಹಾಗೂ ಸದರಿ ಪ್ರಕರಣಗಳಲ್ಲಿನ ಅಂತಿಮ ತೀರ್ಪಿನ ಮೇರೆಗೆ ಸರ್ಕಾರವು ನಿಯಮಾನುಸಾರ ಕೈಗೊಳ್ಳುವ ತೀರ್ಮಾನಕ್ಕೆ ಬದ್ಧರಾಗಿರುತ್ತಾರೆ.

11) ಅಧಿಕಾರಿ / ನೌಕರರುಗಳು ಮೇಲ್ಕಂಡಂತೆ ಇಲಾಖೆಗಳಿಗೆ ಸಲ್ಲಿಸಿದ ಅಭಿಮತ ಇಚ್ಛಾಪತ್ರಗಳಂತೆ, ಹಂಚಿಕೆ ಮಾಡಿದ ದಿನಾಂಕದ ನಂತರದ ಅವಧಿಯಲ್ಲಿ ವಿವಿಧ ಕಾರಣಗಳ ಮೇರೆಗೆ ಅಭಿಮತಗಳನ್ನು ಸಲ್ಲಿಸದೇ ಇರುವ ಅಥವಾ ನಂತರದ ಅವಧಿಯಲ್ಲಿ ಸಲ್ಲಿಸಿರುವಂತಹ ಅಭಿಮತಗಳನ್ನು ಪರಿಗಣಿಸಬೇಕಾದಲ್ಲಿ ಅಂತಹ ಅಧಿಕಾರಿ / ನೌಕರರ ಜ್ಯೇಷ್ಠತೆಯನ್ನು ಅವರ ಸೇವೆಯನ್ನು ಅಭಿಮತ ಸಲ್ಲಿಸಿದ ಇಲಾಖೆಗೆ ವಿಲೀನಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಕಾಯ್ದುಕೊಳ್ಳುವುದು.

12) ಮೇಲ್ಕಂಡ ಷರತ್ತುಗಳೊಂದಿಗೆ ಇಲಾಖೆಗಳ ಬೇರ್ಪಡೆ ಕುರಿತು ಈಗಾಗಲೇ ರಚಿಸಿರುವ ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿನ ಸಮಿತಿಯ ಮಾರ್ಗಸೂಚಿಗಳನ್ನು ಸಹಾ ಅಳವಡಿಸಿಕೊಳ್ಳುವ ಷರತ್ತಿಗೊಳಪಟ್ಟಿರುತ್ತದೆ.ಹಾಗೂ ಲೋ.ಇ. 216 ಸೇಸಕಿ 2018 (ಭಾಗ-1) ದಿನಾಂಕ:17-10-2020ರ ಸರ್ಕಾರದ ಪತ್ರದಲ್ಲಿ ಅಧಿಕಾರಿ/ಸಿಬ್ಬಂದಿಗಳ ವೃಂದ ನಿರ್ವಹಣಾ ಪ್ರಾಧಿಕಾರ ಹಾಗೂ ಸಕ್ಷಮ ಪ್ರಾಧಿಕಾರವು ಇಲಾಖಾ ಮುಖ್ಯಸ್ಥರಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ)ಬೆಂಗಳೂರು ರವರು ಆಗಿರುವುದರಿಂದ ಜಲಸಂಪನ್ಮೂಲ ಇಲಾಖೆ, ಹಾಗೂ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗಳಿಗೆ ವಿಲೀನಗೊಳ್ಳಲು ಅಭಿಮತ ವ್ಯಕ್ತಪಡಿಸಿರುವ ಗ್ರೂಪ್ ಬಿ, ಗ್ರೂಪ್ ಸಿ ಮತ್ತು ಗ್ರೂಪ್ ಡಿ ವೃಂದದ ಅಧಿಕಾರಿ/ಸಿಬ್ಬಂದಿಗಳ ಸೇವೆಯನ್ನು ಸಂಬಂದಪಟ್ಟ ಇಲಾಖೆಗೆ ನೀಡುವ ಕುರಿತು ಪರಿಶೀಲಿಸಿ ಅಧಿಕಾರಿ/ಸಿಬ್ಬಂದಿಗಳ ಜೇಷ್ಠತೆಯನ್ನು ಅವರುಗಳು ಲೋಕೋಪಯೋಗಿ ಇಲಾಖೆಯಲ್ಲಿ ಹೊಂದಿದ ಜೇಷ್ಠತೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮಾವಳಿಗಳು 1957 ನಿಯಮ 6 ರ ಪರಂತುಕ(1) ರನ್ವಯ ಅವರುಗಳ ಅಂತರ್ ಜೇಷ್ಠತೆಯನ್ನು ಜಲಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಇಲಾಖೆಗಳು ಕಾಯ್ದುಕೊಂಡು ಅಧಿಕಾರಿ/ ನೌಕರರ ಸೇವೆಯನ್ನು ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977 ರ ನಿಯಮ 16 (ಎ) (ii) ರನ್ವಯ ಶಾಶ್ವತ ವರ್ಗಾವಣೆ ಮುಖೇನ ವರ್ಗಾಯಿಸಲು ಸೂಕ್ತ ಆದೇಶವನ್ನು ಹೊರಡಿಸಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.

ಮುಂದುವರೆದು ಗ್ರೂಪ್ ಎ ವೃಂದದ ಅಧಿಕಾರಿಗಳ ಸೇವೆಯನ್ನು ಜಲಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ವಶಕ್ಕೆ ನೀಡುವ ಕುರಿತು ಸರ್ಕಾರದಲ್ಲಿ ಹೊರಡಿಸಿರುವ ಆದೇಶದಲ್ಲಿನ ಷರತ್ತು ಮತ್ತು ನಿಬಂದನೆಗಳನ್ನು ಗ್ರೂಪ್ ಬಿ, ಮತ್ತು ಗ್ರೂಪ್ ಸಿ ಹಾಗೂ ಗ್ರೂಪ್ ಡಿ ವೃಂದದ ಅಧಿಕಾರಿ/ನೌಕರರುಗಳ ಸೇವೆಯನ್ನು ಜಲಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗಳಿಗೆ ನೀಡುವ ಪ್ರಕ್ರಿಯೆಗೆ ಅಳವಡಿಸಿಕೊಂಡು ಆದೇಶವನ್ನು ಹೊರಡಿಸಲು ನಿರ್ದೇಶಿಸಿರುವಂತೆ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟಿರುತ್ತದೆ.

(ಶಿವಯೋಗಿ ಹಿರೇಮಠ)
ಮುಖ್ಯ ಇಂಜಿನಿಯರ್,
ಸಂಪರ್ಕ ಮತ್ತು ಕಟ್ಟಡಗಳು (ದ),
ಬೆಂಗಳೂರು.
20/10/2020

ಮುಂದುವರೆದು, ಲೋಕೋಪಯೋಗಿ ಇಲಾಖೆಯ ಆದೇಶ ಸಂ.: ಲೋಇ 216 ಸೇಸಕಿ 2018 ದಿನಾಂಕ: 19.05.2020 ರಲ್ಲಿ ಲೋಕೋಪಯೋಗಿ ಇಲಾಖೆಯ ಸೇವೆಗೆ ವಿವಿಧ ವೃಂದಗಳಿಂದ ನೇರ ನೇಮಕಾತಿ, ವಿಶೇಷ ವಿಲೀನಾತಿ, ಸೇವಾ ಸಕ್ರಮಾತಿಗೊಂಡು ಸೇವೆಯಲ್ಲಿರುವ ಅಧಿಕಾರಿ / ನೌಕರರುಗಳು ಲೋಕೋಪಯೋಗಿ ಇಲಾಖೆಯ ಸೇವೆಯಲ್ಲಿ ಶಾಶ್ವತವಾಗಿ ಉಳಿಯಲು ಒಂದು ಬಾರಿಗೆ ಮಾತ್ರ ಅನ್ವಯಿಸುವ ಷರತ್ತಿಗೊಳಪಟ್ಟು ಅಭಿಮತಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಿ ಕಾರ್ಯಕಾರಿ ಆದೇಶವನ್ನು ಹೊರಡಿಸಲಾಗಿದೆ.

ಮೇಲ್ಕಂಡ ಆದೇಶಗಳನ್ವಯ ಮೂರು ಇಲಾಖೆಗಳಲ್ಲಿ ಶಾಶ್ವತವಾಗಿ ವಿಲೀನಗೊಳ್ಳಲು ಇಚ್ಛಿಸಿರುವ ಅಧಿಕಾರಿ / ನೌಕರರು ಅಭಿಮತ ಇಚ್ಛಾ ಪತ್ರಗಳನ್ನು ಸಲ್ಲಿಸಿದ್ದು, ಅದರಂತೆ ದಿನಾಂಕ: 04.09.2020 ಹಾಗೂ ದಿನಾಂಕ: 29.09.2020 ರಂದು ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮೂರು ಇಲಾಖೆಗಳ ಅಪರ ಮುಖ್ಯ ಕಾರ್ಯದರ್ಶಿ / ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳು ಚರ್ಚಿಸಿದಂತೆ ಪ್ರಥಮವಾಗಿ ಲೋಕೋಪಯೋಗಿ ಇಲಾಖೆಯು ಜಲ ಸಂಪನ್ಮೂಲ ಇಲಾಖೆ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳ ಸೇವೆಯಲ್ಲಿ ವಿಲೀನಗೊಳ್ಳಲು ಸಲ್ಲಿಸಿರುವ ಅಭಿಮತ ಇಚ್ಛಾಪತ್ರಗಳಂತೆ ಅಧಿಕಾರಿ / ನೌಕರರುಗಳನ್ನು ನಿಯಮಾನುಸಾರ ಹಂಚಿಕೆ ಮಾಡಲು ಹಾಗೂ ಇದೇ ರೀತಿ ಜಲ ಸಂಪನ್ಮೂಲ ಇಲಾಖೆ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳಲ್ಲಿ ಪಡೆದಿರುವ ಅಭಿಮತ ಇಚ್ಛಾಪತ್ರಗಳಂತೆ ಅಧಿಕಾರಿ / ನೌಕರರುಗಳನ್ನು ಆಯಾ ಇಲಾಖೆಗಳಿಗೆ ಶಾಶ್ವತ ವರ್ಗಾವಣೆ ಮೂಲಕ ವರ್ಗಾಯಿಸಲು ನಿರ್ಣಯಿಸಲಾಯಿತು. ಮುಂದುವರೆದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಕೆಲವು ಅಧಿಕಾರಿಗಳು ಸಲ್ಲಿಸಿದ ಅರ್ಜಿ ಸಂ: 7493-7502/2019 ಮತ್ತು 7620-7653/2019 ಹಾಗೂ ಅರ್ಜಿ ಸಂಖ್ಯೆ: 2431-2435/2020 (ಶ್ರೀ ಸುನೀಲ್ ಕುಮಾರ್ ವಿ.ಸಿ. ಮತ್ತು ಇತರರಿಂದ) (ಅಂದರೆ ಡಿ.ಆರ್-3) ಮತ್ತಿತರ ಅರ್ಜಿಗಳಲ್ಲಿನ ವಿಷಯಗಳ ಬಗ್ಗೆ ಚರ್ಚಿಸಲಾಯಿತು. ಮುಂದುವರೆದು, ಮಾನ್ಯ ಕರ್ನಾಟಕ ರಾಜ್ಯ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 04.09.2020 ರಂದು ನೀಡಿರುವ ಆದೇಶದಲ್ಲಿ ಇತರೆ ಅಂಶಗಳ ಜೊತೆಗೆ ಅರ್ಜಿಗಳು ಇತ್ಯರ್ಥಕ್ಕಾಗಿ ಬಾಕಿ ಇದ್ದ ಸಂದರ್ಭದಲ್ಲಿ ಇಚ್ಛಾ ಪತ್ರಗಳನ್ನು ಸಲ್ಲಿಸಲು ಅವಕಾಶ ನೀಡಿರುವುದರಿಂದ ಪ್ರತಿವಾದಿಗಳಾದ ಮೂರು ಇಲಾಖೆಗಳು ಮತ್ತೊಮ್ಮೆ ಇಚ್ಛಾ ಪತ್ರ ಸಲ್ಲಿಸಲು ಅಂತಿಮ ಅವಕಾಶ ನೀಡುವ ಬಗ್ಗೆ ಇಲಾಖೆಯ ಹಂತದಲ್ಲಿಯೇ ಅವಶ್ಯಕತೆಯ ಬಗ್ಗೆ ಮರು ಪರಿಶೀಲಿಸುವಂತೆ ಸೂಚಿಸಿರುತ್ತದೆ. ಈ ವಿಷಯದ ಕುರಿತು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 29.09.2020 ರಂದು ನಡೆದ ಸಭೆಯಲ್ಲಿ ಸುದೀರ್ಘವಾಗಿ ಚರ್ಚಿಸಿ ಈಗಾಗಲೇ ಪ್ರತಿವಾದಿಗಳಾಗಿರುವ ಮೂರು ಇಲಾಖೆಗಳು ಲೋಕೋಪಯೋಗಿ ಇಲಾಖೆಯ ವಿವಿಧ ವೃಂದಗಳ ಅಧಿಕಾರಿ / ನೌಕರರುಗಳಿಗೆ ಅಭಿಮತ / ಇಚ್ಛಾಪತ್ರಗಳನ್ನು ನೀಡಲು ಅವಕಾಶ ಕಲ್ಪಿಸಿರುವುದರ ಜೊತೆಗೆ ಈ ಮಾಹಿತಿಯನ್ನು ಎಲ್ಲರ ಗಮನಕ್ಕೆ ತರಲಾಗಿರುವುದರಿಂದ, ಮತ್ತೊಮ್ಮೆ ಅಭಿಮತ / ಇಚ್ಛಾಪತ್ರ ಸಲ್ಲಿಸಲು ಅಂತಿಮ ಅವಕಾಶ ನೀಡುವ ಅವಶ್ಯಕತೆ ಇಲ್ಲವೆಂದು ಸಭೆಯಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ ಮತ್ತೊಮ್ಮೆ ಅಭಿಮತ / ಇಚ್ಛಾಪತ್ರ ಸಲ್ಲಿಸಲು ಅಂತಿಮ ಅವಕಾಶ ನೀಡುವುದನ್ನು ಕೈಬಿಟ್ಟು, ಈಗಾಗಲೆ ಮೂರು ಇಲಾಖೆಗಳಿಗೆ ಸಲ್ಲಿಸಿರುವ ಇಚ್ಛಾ ಪತ್ರಗಳನ್ನು ಆಧರಿಸಿ ಜಲ ಸಂಪನ್ಮೂಲ ಇಲಾಖೆ ಹಾಗೂ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳಿಗೆ ವಿವಿಧ ವೃಂದಗಳ ಅಧಿಕಾರಿ / ನೌಕರರ ಸೇವೆಯನ್ನು ಶಾಶ್ವತವಾಗಿ ನೀಡಲು ನಿರ್ಣಯಿಸಲಾಗಿರುತ್ತದೆ.

ಅದರನ್ವಯ, ಲೋಕೋಪಯೋಗಿ ಇಲಾಖೆಯ ಸಹಾಯಕ ಇಂಜಿನಿಯರ್ (ವಿಭಾಗ-2) ವೃಂದದ ಅಧಿಕಾರಿಗಳನ್ನು ಅನುಬಂಧ-1 ರಲ್ಲಿರುವ ಷರತ್ತು ಮತ್ತು ನಿಬಂಧನೆಗಳಗೊಳಪಟ್ಟು ಅನುಬಂಧ-2 ರಲ್ಲಿನ ಪಟ್ಟಿಯಂತೆ ಲೋಕೋಪಯೋಗಿ ಇಲಾಖೆಯಿಂದ ಜಲ ಸಂಪನ್ಮೂಲ ಇಲಾಖೆಗೆ ಹಾಗೂ ಅನುಬಂಧ-3 ರಲ್ಲಿನ ಪಟ್ಟಿಯಂತೆ ಲೋಕೋಪಯೋಗಿ ಇಲಾಖೆಯಿಂದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಅವರುಗಳು ಸಲ್ಲಿಸಿರುವ ಅಭಿಮತ ಇಚ್ಛಾಪತ್ರಗಳಂತೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 16 (ಎ) (ii) ರನ್ವಯ ಶಾಶ್ವತ ವರ್ಗಾವಣೆ ಮೂಲಕ ವರ್ಗಾಯಿಸಲು ಸರ್ಕಾರದ ಪತ್ರ ಸಂ:ಲೋಇ 216 ಸೇಸಕಿ 2018 (ಭಾ-1) ದಿನಾಂಕ:17-10-2020ರಲ್ಲಿ ನೀಡಿರುವ ಅನುಮೋದನೆಯಂತೆ ಷರತ್ತು ಮತ್ತು ನಿಬಂಧನೆಗಳಗೊಳಪಟ್ಟು, ನಿರ್ಣಯಿಸಿ, ಲೋಕೋಪಯೋಗಿ ಇಲಾಖೆಯ ಸಹಮತಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನೀಡಲಾಗಿದೆ.

ಇಲಾಖೆಗಳ ಬೇರ್ಪಡೆ ಪ್ರಕ್ರಿಯೆಗೆ ಅಭಿಮತ ಸಲ್ಲಿಸಿದ ನಂತರ ಈ ಆದೇಶ ಹೊರಡಿಸುವ ಪೂರ್ವದಲ್ಲಿ ಸಹಾಯಕ ಇಂಜಿನಿಯರ್ (ವಿಭಾಗ-2)ವೃಂದದ ಯಾವುದೇ ಅಧಿಕಾರಿಯು ಒಂದು ವೇಳೆ ಸೇವೆಯಿಂದ ವಯೋ ನಿವೃತ್ತಿ ಹೊಂದಿದ್ದಲ್ಲಿ ಅಥವಾ ಪದೋನ್ನತಿ ಹೊಂದಿದ್ದಲ್ಲಿ ಅಂತಹ ಅಧಿಕಾರಿಯ ಸೇವೆಯು ಈ ಶಾಶ್ವತ ವರ್ಗಾವಣೆಯ ಪ್ರಕ್ರಿಯೆಗೆ ಒಳಪಡುವುದಿಲ್ಲ.

ಮೇಲ್ಕಂಡ ಮೂರು ಇಲಾಖೆಗಳ ಅಧಿಕಾರಿ / ಸಿಬ್ಬಂದಿಗಳನ್ನು ಬೇರ್ಪಡೆ ಮಾಡುವ ಕುರಿತು ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ಶ್ರೀ ಡಿ. ಮೂರ್ತಿ ಮತ್ತು ಇತರರು ದಾಖಲಿಸಿರುವ ರಿಟ್ ಅರ್ಜಿ ಸಂ. 10261/2020 ಹಾಗೂ ಇತರೆ ಪ್ರಕರಣಗಳು ಮತ್ತು ಕರ್ನಾಟಕ ರಾಜ್ಯ ಆಡಳಿತ ನ್ಯಾಯ ಮಂಡಳಿಯಲ್ಲಿ ಶ್ರೀ ತ್ರಿನೇಶ್ವರ್ ಮತ್ತು ಇತರರು ದಾಖಲಿಸಿರುವ ಅ.ಸಂ. 6587-6589/2019, ಶ್ರೀ ಚಂದ್ರೇಗೌಡ ಹೆಚ್.ಜಿ. ಮತ್ತು ಇತರರು ದಾಖಲಿಸಿರುವ ಅ.ಸಂ. 6494-6507/2019, ಶ್ರೀ ಸುನಿಲ್ ಕುಮಾರ್ ಮತ್ತು ಇತರರು (DR-3) ದಾಖಲಿಸಿರುವ ಅ.ಸಂ. 2431-2435 ಮತ್ತು 2486-2490/2020 ಹಾಗೂ ಇತರೆ ಪ್ರಕರಣಗಳ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.

(ಶಿವಯೋಗಿ ಹಿರೇಮಠ)
ಮುಖ್ಯ ಇಂಜಿನಿಯರ್,
ಸಂಪರ್ಕ ಮತ್ತು ಕಟ್ಟಡಗಳು (ದ),
ಬೆಂಗಳೂರು.
20/10/2020

ಮೇಲ್ಕಂಡ ಅಧಿಸೂಚನೆಯನ್ನು ಈ ಕೆಳಕಂಡವರಿಗೆ ಮಾಹಿತಿಗಾಗಿ ಹಾಗೂ ಸೂಕ್ತ ಕ್ರಮಕ್ಕಾಗಿ ಸಲ್ಲಿಸಲಾಗಿದೆ ಮತ್ತು ಕಳುಹಿಸಲಾಗಿದೆ.

ಇವರಿಗೆ:
1. ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು
2. ಪ್ರಧಾನ ಮಹಾಲೇಖಪಾಲರು (ಎ&ಇ), ಕರ್ನಾಟಕ, ಬೆಂಗಳೂರು
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, ಬೆಂಗಳೂರು.
5. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.

6. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು.
7. ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
8. ಸರ್ಕಾರದ ಎಲ್ಲಾ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳು / ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು, ವಿಧಾನಸೌಧ / ವಿಕಾಸಸೌಧ / ಬಹುಮಹಡಿ ಕಟ್ಟಡ / ವಿಶ್ವೇಶ್ವರಯ್ಯ ಗೋಪುರ.
9. ಪ್ರಧಾನ ಇಂಜಿನಿಯರ್, ಇಂಜಿನಿಯರಿಂಗ್ ಘಟಕ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು
10. ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು
11. ಪ್ರಧಾನ ಇಂಜಿನಿಯರ್,ಯೋಜನೆ ಮತ್ತು ಆಸ್ತಿ ನಿರ್ವಹಣಾ ಕೇಂದ್ರ,ಬೆಂಗಳೂರು
12. ಮುಖ್ಯ ಇಂಜಿನಿಯರ್, ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು
13. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ
14. ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಲಯ, ಬೆಂಗಳೂರು
15. ಮುಖ್ಯ ಇಂಜಿನಿಯರ್, ಗುಣ ಭರವಸೆ ವಲಯ, ಬೆಂಗಳೂರು
16. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತ ಕಟ್ಟಡಗಳ (ಈಶಾನ್ಯ), ಕಲಬರಗಿ
17. ಮುಖ್ಯ ಇಂಜಿನಿಯರ್, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ
18. ಮುಖ್ಯ ಇಂಜಿನಿಯರ್, ಹೈಡ್ರಾಲಜಿ ಮತ್ತು ಸೆಂಟ್ರಲ್ ಮೆಕ್ಯಾನಿಕಲ್ ಆರ್ಗನೈಸೇಷನ್, ಬೆಂಗಳೂರು
19. ಮುಖ್ಯ ಇಂಜಿನಿಯರ್, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಸಂಸ್ಥೆ, ಕೆ.ಆರ್.ಎಸ್. ಮಂಡ್ಯ ಜಿಲ್ಲೆ.
20. ಮುಖ್ಯ ಇಂಜಿನಿಯರ್, ನೀರಾವರಿ (ಉತ್ತರ), ಬೆಳಗಾವಿ
21. ಮುಖ್ಯ ಇಂಜಿನಿಯರ್, ಮಲಪ್ರಭಾ ಯೋಜನೆ, ಧಾರವಾಡ
22.ಮುಖ್ಯ ಇಂಜಿನಿಯರ್, ಭದ್ರಾ ಮೇಲ್ದಂಡೆ ಯೋಜನೆ, ಚಿತ್ರದುರ್ಗ
23.ಮುಖ್ಯ ಇಂಜಿನಿಯರ್, ವರಾಹಿ ನೀರಾವರಿ ಯೋಜನೆ, ಸಿದ್ದಾಪುರ
24.ಮುಖ್ಯ ಇಂಜಿನಿಯರ್, ಕೃಷ್ಣಾ ಮೇಲ್ದಂಡೆ ಅಣೆಕಟ್ಟು ವಲಯ, ಆಲಮಟ್ಟಿ
25.ಮುಖ್ಯ ಇಂಜಿನಿಯರ್, ನಾಲಾ ವಲಯ ನಂ. 1, ಭೀಮರಾಯನಗುಡಿ
26.ಮುಖ್ಯ ಇಂಜಿನಿಯರ್, ನಾಲಾ ವಲಯ ನಂ. 2, ಕೆಂಭಾವಿ
27.ಮುಖ್ಯ ಇಂಜಿನಿಯರ್, ಆಪರೇಷನ್ ಮತ್ತು ಮೇಲ್ವಿಚಾರಣೆ ವಲಯ, ನಾರಾಯಣಪುರ
28.ಮುಖ್ಯ ಇಂಜಿನಿಯರ್, ನೀರಾವರಿ (ದಕ್ಷಿಣ), ಮೈಸೂರು
29.ಮುಖ್ಯ ಇಂಜಿನಿಯರ್, ಹೇಮಾವತಿ ಯೋಜನೆ, ಗೊರೂರು, ಹಾಸನ ಜಿಲ್ಲೆ
30.ಮುಖ್ಯ ಇಂಜಿನಿಯರ್, ಹೇಮಾವತಿ ನಾಲಾ ವಲಯ, ತುಮಕೂರು
31. ಮುಖ್ಯ ಇಂಜಿನಿಯರ್, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ
32. ಮುಖ್ಯ ಇಂಜಿನಿಯರ್, ನೀರಾವರಿ ಯೋಜನಾ ವಲಯ, ಗುಲ್ಬರ್ಗಾ
33. ಮುಖ್ಯ ಇಂಜಿನಿಯರ್, ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಯೋಜನೆ, ಬೆಂಗಳೂರು
34. ಮುಖ್ಯ ಕಾರ್ಯಾಚರಣೆ ಅಧಿಕಾರಿಗಳು, ಕೆಆರ್‌ಆರ್‌ಡಿಎ, ಬೆಂಗಳೂರು
35. ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಸಂಸ್ಥೆ, ಕೆ.ಆರ್.ಎಸ್., ಮಂಡ್ಯ ಜಿಲ್ಲೆ
36.ನಿರ್ದೇಶಕರು, ಜಲ ಮತ್ತು ಭೂ ನಿರ್ವಹಣೆ ಸಂಸ್ಥೆ, ಧಾರವಾಡ
37.ಪ್ರಧಾನ ಮುಖ್ಯ ವಾಸ್ತು ಶಿಲ್ಪಿ, ಬೆಂಗಳೂರು.
38.ಆಡಳಿತಾಧಿಕಾರಿಗಳು, ತುಂಗಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಮುನಿರಾಬಾದ್
39.ಆಡಳಿತಾಧಿಕಾರಿಗಳು, ಮಲಪ್ರಭಾ ಮತ್ತು ಘಟಪ್ರಭಾ ಯೋಜನಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಬೆಳಗಾವಿ
40. ಆಡಳಿತಾಧಿಕಾರಿಗಳು, ಕಾವೇರಿ ಕಣಿವೆ ಯೋಜನಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಮೈಸೂರು
41. ಆಡಳಿತಾಧಿಕಾರಿಗಳು, ಕೃಷ್ಣ ಮೇಲ್ದಂಡೆ ಯೋಜನೆ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಭೀಮರಾಯನಗುಡಿ
42.ಆಡಳಿತಾಧಿಕಾರಿಗಳು, ಭದ್ರಾ ಅಣೆಕಟ್ಟು ಯೋಜನೆ, ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ
43.ಆಡಳಿತಾಧಿಕಾರಿಗಳು, ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಗುಲ್ಬರ್ಗಾ
44.ಎಲ್ಲಾ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, - - - - -
45.ಎಲ್ಲಾ ಅಧೀಕ್ಷಕ ಇಂಜಿನಿಯರ್, ಲೋಇ ವೃತ್ತ, - - - - - - - - -
46.ಎಲ್ಲಾ ಅಧೀಕ್ಷಕ ಇಂಜಿನಿಯರ್, ರಾಹೆ ವೃತ್ತ, - - - - - - - - -
47.ಎಲ್ಲಾ ಅಧೀಕ್ಷಕ ಇಂಜಿನಿಯರ್, ಪಂರಾಇಂ ವೃತ್ತ, - - - - - -

48.ಎಲ್ಲಾ ಕಾರ್ಯಪಾಲಕ ಇಂಜಿನಿಯರುಗಳು, ಲೋಇ ವಿಭಾಗ :ರಾಹೆ ವಿಭಾಗ: ಪಂರಾಇಂ ವಿಭಾಗ:ಗುಣ ಭರವಸೆ ವಿಭಾಗ: ಯೋಜನಾ ವಿಭಾಗ,
49.ಜಿಲ್ಲಾ ಸಮನ್ವಯಧಿಕಾರಿಗಳು ಜಿಲ್ಲಾ ಸಮನ್ವಯ ಘಟಕ ಬಿಜಾಪುರ:ಗುಲ್ಬರ್ಗಾ:ಬೆಳಗಾಂ:ರಾಯಚೂರು
50. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.
51. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.
52.ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ, ಮೈಸೂರು.
53.ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪಾಧಿಕಾರ, ಮೈಸೂರು.
54.ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು.
55.ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ.
56.ಆಯುಕ್ತರು, ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ, ಹುಬ್ಬಳ್ಳಿ.
57.ಆಯುಕ್ತರು, ಬೆಳಗಾಂ ಮಹಾನಗರ ಪಾಲಿಕೆ, ಬೆಳಗಾಂ.
58.ಆಯುಕ್ತರು, ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾಂ.
59.ಆಯುಕ್ತರು, ಬಿಜಾಪುರ ನಗರಾಭಿವೃದ್ಧಿ ಪ್ರಾಧಿಕಾರ, ಬಿಜಾಪುರ.
60. ಆಯುಕ್ತರು, ಬಿಜಾಪುರ ನಗರಪಾಲಿಕೆ, ಬಿಜಾಪುರ.
61. ಆಯುಕ್ತರು, ದಾವಣಗೆರೆ ನಗರಪಾಲಿಕೆ, ದಾವಣಗೆರೆ.
62.ಆಯುಕ್ತರು, ಗುಲ್ಬರ್ಗಾ ನಗರಪಾಲಿಕೆ, ಗುಲ್ಬರ್ಗಾ.
63.ಆಯುಕ್ತರು, ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರ, ತುಮಕೂರು.
64.ಆಯುಕ್ತರು, ತುಮಕೂರು ಮಹಾನಗರಪಾಲಿಕೆ, ತುಮಕೂರು
65.ಆಯುಕ್ತರು, ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರ, ಗುಲ್ಬರ್ಗಾ.
66.ಆಯುಕ್ತರು, ದಾವಣಗೆರೆ ನಗರಾಭಿವೃದ್ಧಿ ಪ್ರಾಧಿಕಾರ, ದಾವಣಗೆರೆ.
67.ಆಯುಕ್ತರು, ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರ, ಮಂಡ್ಯ.
68.ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ.
69.ಆಯುಕ್ತರು, ಹಿಂದೂ ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು.
70.ಆಯುಕ್ತರು, ಕರ್ನಾಟಕ ಗೃಹ ಮಂಡಳ, ಬೆಂಗಳೂರು.
71. ಆಯುಕ್ತರು, ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ನಿಗಮ, ಬೆಂಗಳೂರು.
72.ಆಯುಕ್ತರು, ಕೃಷಿ ಇಲಾಖೆ, ಬೆಂಗಳೂರು.
73.ಆಯುಕ್ತರು, ಕರ್ನಾಟಕ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಸಂಸ್ಥೆ, ಬೆಂಗಳೂರು
74.ಎಲ್ಲಾ ಆಯುಕ್ತರು, ನಗರಸಭೆ
75.ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಇಲಾಖೆ, ವಸಂತನಗರ, ಬೆಂಗಳೂರು.
76.ವ್ಯವಸ್ಥಾಪಕ ನಿರ್ದೇಶಕರು, ಕಾಫಿ ಮಂಡಳ, ಅಂಬೇಡ್ಕರ್ ವೀದಿ, ಬೆಂಗಳೂರು.
77.ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿಯಮಿತ, ದೇವರಾಜ್ ಅರಸ್ ರೋಡ್, ಬೆಂಗಳೂರು.
78.ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು:ಬೆಂಗಳೂರು
79.ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿನಿಗಮ ನಿಯಮಿತ, ಬೆಂಗಳೂರು:ಧಾರವಾಡ
80. ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಬೆಂಗಳೂರು:ಆಲಮಟ್ಟಿ
81. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳ, ಬೆಂಗಳೂರು.
82.ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳ, ಬನ್ನೇರುಘಟ್ಟ ರಸ್ತೆ, ಬೆಂಗಳೂರು.
83.ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳ ಕಾವೇರಿ ಭವನ, ಬೆಂಗಳೂರು.
84.ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪೋಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಪ್ರಿಂ ರೋಸ್ ರಸ್ತೆ, ಬೆಂಗಳೂರು.
85.ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕೈಗಾರಿಕಾ ಪದೇಶಾಭಿವೃದ್ಧಿ ಮಂಡಳ, ಬೆಂಗಳೂರು.
86.ವ್ಯವಸ್ಥಾಪಕ ನಿರ್ದೇಶಕರು, ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳ, ಗುಲ್ಬರ್ಗಾ.

87. ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಚಾಮರಾಜೇಂದ್ರ ಮೃಗಾಲಯ, ಮೈಸೂರು.

88. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ನಿಯಮಿತ, ಬೆಂಗಳೂರು.
89. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ, ಬೆಂಗಳೂರು
90. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಅಭಿವೃದ್ಧಿ ನಿಗಮ, ಬೆಂಗಳೂರು.
91. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ, ಬಳ್ಳಾರಿ ರಸ್ತೆ, ಹೆಬ್ಬಾಳ, ಬೆಂಗಳೂರು.
92. ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಅಭಿವೃದ್ಧಿ ನಿಗಮ, ಮಿಲ್ಲರ್ಸ್ ರಸ್ತೆ, ಬೆಂಗಳೂರು.
93. ನಿರ್ದೇಶಕರು, ಜಯದೇವ ಹೃದ್ರೋಗ ಸಂಸ್ಥೆ, ಬೆಂಗಳೂರು.
94. ನಿರ್ದೇಶಕರು, ನಿಮ್ಹಾನ್ಸ್, ಬೆಂಗಳೂರು.
95. ನಿರ್ದೇಶಕರು, ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ, ರೇಷ್ಮೆ ಇಲಾಖೆ, ಹೊಸೂರು ರಸ್ತೆ, ಬೆಂಗಳೂರು.
96. ನಿರ್ದೇಶಕರು, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ, ಮೈಸೂರು.
97. ಕಾರ್ಯನಿರ್ವಹಣಾ ನಿರ್ದೇಶಕರು, ಬನ್ನೇರುಘಟ್ಟ ಬಯಾಲಾಜಿಕಲ್ ಪಾರ್ಕ್, ಬೆಂಗಳೂರು.
98. ಕಾರ್ಯನಿರ್ವಹಣಾ ಅಧಿಕಾರಿ, ಅರಮನೆ ಮಂಡಳಿ, ಮೈಸೂರು.
99. ಅಧೀಕ್ಷಕ ಇಂಜಿನಿಯರ್, ಕೃಷಿ ಮಾರುಕಟ್ಟೆ ಅಭಿವೃದ್ಧಿ ಯೋಜನೆ, ಕೃಷಿ ಮಾರಾಟ ಇಲಾಖೆ, ರಾಜಭವನ ರಸ್ತೆ, ಬೆಂಗಳೂರು.
100. ನಿಬಂಧಕರು, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು.
101. ಅಧೀಕ್ಷಕ ಇಂಜಿನಿಯರ್, ಕರ್ನಾಟಕ ಆರೋಗ್ಯ ಪದ್ಧತಿ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆ, ಬೆಂಗಳೂರು.
102. ನಿಬಂಧಕರು, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು : ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು :ಮೈಸೂರು ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು:ಕುವೆಂಪು ವಿಶ್ವಾವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ: ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ:ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು:ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು:ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ
103. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು
104. ಎಲ್ಲಾ ಆಯುಕ್ತರು, ನಗರಸಭೆ, – – – – – – – –
105. ಎಲ್ಲಾ ಮುಖ್ಯಾಧಿಕಾರಿಗಳು, ಪುರಸಭೆ, – – – – – –
106. ಎಲ್ಲಾ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್, – – – – – – – – –
107. ಅಧ್ಯಕ್ಷರು, ಕರ್ನಾಟಕ ಇಂಜಿನಿಯರುಗಳ ಸಂಘ, ಕೆಆರ್ ವೃತ್ತ, ಬೆಂಗಳೂರು
108. ಅಧ್ಯಕ್ಷರು, ಕರ್ನಾಟಕ ಇಂಜಿನಿಯರುಗಳ ಸೇವಾ ಸಂಘ, ಕೆಆರ್ ವೃತ್ತ, ಬೆಂಗಳೂರು
109. ನಿಬಂಧಕರು, ಕೇಂದ್ರ ಕಛೇರಿ, ಬೆಂಗಳೂರು.
110. ಎಲ್ಲಾ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್

(ಶಿವಯೋಗಿ ಹಿರೇಮಠ)
ಮುಖ್ಯ ಇಂಜಿನಿಯರ್,
ಸಂಪರ್ಕ ಮತ್ತು ಕಟ್ಟಡಗಳು (ದ),
ಬೆಂಗಳೂರು.

## ಅನುಬಂಧ-1

## ಷರತ್ತು ಮತ್ತು ನಿಬಂಧನೆಗಳು

1) ಅಭಿಮತ ಸಲ್ಲಿಸಿರುವ ಅಧಿಕಾರಿ/ ನೌಕರರ ಸೇವೆಯನ್ನು ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977 ರ ನಿಯಮ 16 (ಎ) (ii) ರನ್ವಯ ಜಲ ಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳಿಗೆ ಶಾಶ್ವತ ವರ್ಗಾವಣೆ ಮುಖೇನ ವರ್ಗಾಯಿಸಲು ಲೋಕೋಪಯೋಗಿ ಇಲಾಖೆಯು ನಿರ್ಣಯಿಸಿದೆ.

2) ಬಿ.ಕೆ.ಪವಿತ್ರ ಪ್ರಕರಣದ ಹಿನ್ನಲೆಯಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಮುಖ್ಯ ಇಂಜಿನಿಯರ್ ವೃಂದದಿಂದ ಕಿರಿಯ ಇಂಜಿನಿಯರ್ ವೃಂದದವರೆಗೂ ಹಾಗೂ ಎಲ್ಲಾ ಲಿಪಿಕ ವರ್ಗದ ವೃಂದವಾರು ಹುದ್ದೆಗಳಲ್ಲೂ ಸಹ ಬಹಳಷ್ಟು ಮುಂಬಡ್ತಿ ಮತ್ತು ಹಿಂಬಡ್ತಿಗಳಾಗಿದ್ದು, ಲೋಕೋಪಯೋಗಿ / ಜಲ ಸಂಪನ್ಮೂಲ / ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳಲ್ಲಿನ ಹುದ್ದೆಗಳನ್ನು ಗಣನೆಗೆ ತೆಗೆದುಕೊಂಡು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದಿಂದ ಮುಖ್ಯ ಇಂಜಿನಿಯರ್ ವೃಂದದವರೆಗೆ ಲೋಕೋಪಯೋಗಿ ಇಲಾಖೆಯಲ್ಲಿ ನಿರ್ವಹಣೆ ಮಾಡಿದ್ದು, ಸಿ.ಆ.ಸು. ಇಲಾಖೆಯ ಮಾರ್ಗಸೂಚಿಯಂತೆ 2017 ರ ಅಧಿನಿಯಮದ ಅನುಸಾರ 1978 ರಿಂದ 2019 ರವರೆಗೂ ಎಲ್ಲಾ ವೃಂದಗಳಲ್ಲಿ ಮೀಸಲಾತಿ ಅನ್ವಯ 15+3 ಇರುವಂತೆ ಸಂಪೂರ್ಣವಾಗಿ ರಿವ್ಯೂ ಮಾಡಿ ಜೇಷ್ಠತಾ ಪಟ್ಟಿಗಳನ್ನು ಲೋಕೋಪಯೋಗಿ ಇಲಾಖೆಯ ಮುಖಾಂತರ ಪ್ರಕಟಿಸಲಾಗಿರುತ್ತದೆ. ಅದೇ ರೀತಿ ಮೂರು ಇಲಾಖೆಗೆ ಸಂಬಂಧಿಸಿದಂತೆ ಲಿಪಿಕ ವರ್ಗದ ಜೇಷ್ಠತಾ ಪಟ್ಟಿಗಳನ್ನು ಸಹ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಮುಖಾಂತರ 1978 ರಿಂದ ರಿವ್ಯೂ ಮಾಡಿ ಪ್ರಕಟಿಸಲಾಗಿರುತ್ತದೆ.

3) ಮೇಲಿನಂತೆ ಶಾಶ್ವತ ವರ್ಗಾವಣೆಗೊಂಡ **ಸಹಾಯಕ ಇಂಜಿನಿಯರ್,ವಿಭಾಗ-2 ವೃಂದದ** ಅಧಿಕಾರಿಗಳ ಜ್ಯೇಷ್ಠತೆಯನ್ನು ಅವರುಗಳು ಲೋಕೋಪಯೋಗಿ ಇಲಾಖೆಯಲ್ಲಿ ಹೊಂದಿದ್ದ ಜ್ಯೇಷ್ಠತೆಯನ್ನು ಪರಿಗಣಿಸಿ, ಕೆ.ಸಿ.ಎಸ್. (ಜೇಷ್ಠತಾ) ನಿಯಮಾವಳಿಯ ನಿಯಮ 6 ರ ಪರಂತುಕ (1) ರನ್ವಯ ಅವರುಗಳ ಅಂತರ್ ಜ್ಯೇಷ್ಠತೆಯನ್ನು ಪವಿತ್ರ-2 ಪ್ರಕರಣದ ಹಿನ್ನಲೆಯಲ್ಲಿ, ವಿವಿಧ ವೃಂದದ ಜ್ಯೇಷ್ಠತಾ ಪಟ್ಟಿಗಳನ್ನು ಮೀಸಲಾತಿ ಹಾಗೂ ಇತರೆ ಅಂಶಗಳನ್ನು ಪರಿಗಣಿಸಿ, ಲೋಕೋಪಯೋಗಿ ಇಲಾಖೆಯು ಪ್ರಕಟಿಸಿರುವ ಅಂತಿಮ ಜ್ಯೇಷ್ಠತಾ ಪಟ್ಟಿಗಳನುಸಾರ ಅಂತರ್ ಜ್ಯೇಷ್ಠತೆಯನ್ನು ಜಲ ಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳು ಕಾಯ್ದುಕೊಳ್ಳುವುದು.

4) ಅಭಿಮತ ಸಲ್ಲಿಸಿರುವ ಸಹಾಯಕ ಇಂಜಿನಿಯರ್-ವಿಭಾಗ-2 ವೃಂದದ ಅಧಿಕಾರಿಗಳಿಗೆ ಬಿ.ಕೆ. ಪವಿತ್ರ ಮತ್ತು ಇತರರ ನ್ಯಾಯಾಲಯ ಪ್ರಕರಣಗಳ ಹಿನ್ನಲೆಯಲ್ಲಿ ಈ ಹಿಂದೆ ನಿಯಮ-32 ರಡಿ ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶಿಸಿರುವ ಬಡ್ತಿಗಳನ್ನು ಪರಿಗಣಿಸಲಾಗಿದೆ. ಪ್ರಸ್ತುತ, ಬಿ.ಕೆ. ಪವಿತ್ರ ಪ್ರಕರಣವು ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಇತ್ಯರ್ಥಗೊಂಡಿದ್ದು, ಸಹಾಯಕ ಇಂಜಿನಿಯರ್,ವಿಭಾಗ-2 ವೃಂದದ ಅಂತಿಮ ಜ್ಯೇಷ್ಠತಾಪಟ್ಟಿಯನ್ನು **ಅಧಿಸೂಚನೆ ಸಂ. ಸಿಐಎಸ್ 118:ಅಂಜೇ.ಪ.:ಸ.ಇಂ.ವಿ-2:ಇಎಸ್ಎಫ್:19-20 ದಿನಾಂಕ:21-09-2020** ರಲ್ಲಿ ಪ್ರಕಟಿಸಲಾಗಿದೆ. ಮುಂದುವರೆದು, ಸದರಿ ವೃಂದದಲ್ಲಿ ಸಹಾಯಕ ಇಂಜಿನಿಯರ್ ವಿಭಾಗ-2 ಹುದ್ದೆಯಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ-2 ಹುದ್ದೆಗೆ ನಿಯಮ-32 ರಡಿ ನೀಡಲಾಗಿರುವ ಬಡ್ತಿಯನ್ನು ಸ್ಥಾನಪನ್ನ ಬಡ್ತಿ ಎಂದು ಪರಿಗಣಿಸಿ ಆದೇಶಿಸಿದ ನಂತರ ಆ ದಿನಾಂಕಕ್ಕೆ ಅನುಗುಣವಾಗಿ ಜ್ಯೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಿ, ಜ್ಯೇಷ್ಠತೆಯನ್ನು ನಿಗಧಿಪಡಿಸುವುದು ಸರ್ಕಾರದಲ್ಲಿ ಬಾಕಿ ಇದ್ದು, ಈ ಕುರಿತು ತ್ವರಿತಗತಿಯಲ್ಲಿ ಕ್ರಮವಹಿಸಲಾಗುತ್ತಿದೆ. ಆದ್ದರಿಂದ, ಪ್ರಸ್ತುತ ಈ ಹಂತದಲ್ಲಿ ಅವರುಗಳ ಸೇವೆಯನ್ನು ಜಲ ಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ನೀಡಿ, ನಂತರ ಪ್ರತ್ಯೇಕವಾಗಿ ಅಂತಿಮ ಜ್ಯೇಷ್ಠತಾ ಸಂಖ್ಯೆಯನ್ನು ನಮೂದಿಸಿ ಕಳುಹಿಸಲಾಗುವುದು.

5) 2003-04 ರಲ್ಲಿ ಲೋಕೋಪಯೋಗಿ / ಜಲ ಸಂಪನ್ಮೂಲ / ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳಲ್ಲಿ ಗುರುತಿಸಲಾದ ಸಹಾಯಕ ಇಂಜಿನಿಯರ್:ಕಿರಿಯ ಇಂಜಿನಿಯರ್ ಬ್ಯಾಕ್‌ಲಾಗ್ ಹುದ್ದೆಗಳನ್ನು ಲೋಕೋಪಯೋಗಿ ಇಲಾಖೆಯಿಂದ ನೇಮಕಾತಿ ಮಾಡಲಾಗಿದ್ದು, ಲೋಕೋಪಯೋಗಿ ಇಲಾಖೆಗಾಗಿ ಗುರುತಿಸಲಾಗಿದ್ದ ಹುದ್ದೆಗಳಿಗಿಂತ ಹೆಚ್ಚುವರಿಯಾಗಿ ಅಭಿಮತಗಳು ಸ್ವೀಕೃತಗೊಂಡಲ್ಲಿ, ಒಟ್ಟು ವೃಂದ ಬಲದಲ್ಲಿ ಮೀಸಲಾತಿ ಸರಿದೂಗಿಸಲು ಅನುಕೂಲವಾಗುವಂತೆ ಲೋಕೋಪಯೋಗಿ ಇಲಾಖೆಯಲ್ಲಿ ಹೆಚ್ಚುವರಿಯಾಗಿ ಉಳಿಯುವ ಬ್ಯಾಕ್‌ಲಾಗ್ ಇಂಜಿನಿಯರ್‌ಗಳ ಪೈಕಿ ಜ್ಯೇಷ್ಠತೆಯಲ್ಲಿ ಕಿರಿಯರಾದವರನ್ನು ಸಮಾನಾಂತರವಾಗಿ ಜಲ ಸಂಪನ್ಮೂಲ / ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳಿಗೆ ಹಂಚಿಕೆ ಮಾಡಲಾಗುವುದು.

6) ಲೋಕೋಪಯೋಗಿ ಇಲಾಖೆ / ಜಲ ಸಂಪನ್ಮೂಲ / ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳಲ್ಲಿ ಅಭಿಮತ ನೀಡಿದ ಇಂಜಿನಿಯರ್‌ಗಳು ಹಾಗೂ ವಿವಿಧ ವೃಂದದ ನೌಕರರು ಆಯಾ ಇಲಾಖೆಯಲ್ಲಿಯೇ ಕಡ್ಡಾಯವಾಗಿ ಕರ್ತವ್ಯ ನಿರ್ವಹಿಸುವುದು ಹಾಗೂ ಅಭಿಮತ ಮೂಲಕ ಇಲಾಖೆಗಳಿಗೆ ವಿಲೀನಗೊಂಡ ವಿವಿಧ ವೃಂದದ ಅಧಿಕಾರಿ / ನೌಕರರು ಯಾವುದೇ ಕಾರಣಕ್ಕೂ ಪುನಃ ಇಲಾಖೆಗಳನ್ನು ಬದಲಾಯಿಸಲು ಅವಕಾಶವಿರುವುದಿಲ್ಲ.

7) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಹಾಗೂ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಲ್ಲಿ ಮಂಜೂರಾಗಿ ಖಾಲಿ ಇರುವ ಹುದ್ದೆಗಳಿಗೆ ಅಭಿಮತ / ಇಚ್ಛಾಪತ್ರಗಳನ್ನು ಆಹ್ವಾನಿಸಿದ್ದು, ಅದರನ್ವಯ ಇಚ್ಛಾಪತ್ರ / ಅಭಿಮತ ಸಲ್ಲಿಸಿದ ಅಧಿಕಾರಿ / ಸಿಬ್ಬಂದಿಗಳ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಶಾಶ್ವತವಾಗಿ ನೀಡಲಾಗಿದೆ.

8) ಇದಲ್ಲದೆ ಲೋಕೋಪಯೋಗಿ ಇಲಾಖೆಯಲ್ಲಿ ಅಭಿಮತ /ಇಚ್ಛಾ ಪತ್ರ ಸಲ್ಲಿಸಿದ ಅಧಿಕಾರಿ / ಸಿಬ್ಬಂದಿಗಳ ಸೇವೆಯನ್ನು ಹಾಗೂ ಹೆಚ್ಚುವರಿ ಸಿಬ್ಬಂದಿಗಳನ್ನು ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಎದುರು ವಿಲೀನಗೊಳಿಸಲು ಅವಕಾಶವಿರುವ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ತಿಳಿಸಿರುವುದರಿಂದ, ಈ ರೀತಿ ಶಾಶ್ವತವಾಗಿ ಸೇವೆ ನೀಡಲು ತೀರ್ಮಾನಿಸಿದ್ದು, ಅಂತಹ ಅಧಿಕಾರಿ / ಸಿಬ್ಬಂದಿಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಲಭ್ಯವಿರುವ ಮಂಜೂರಾದ ಖಾಲಿ ಹುದ್ದೆಗಳಿಗೆ ವಿಲೀನಗೊಳಿಸಲು ಸದರಿ ಇಲಾಖೆ ಕ್ರಮ ವಹಿಸುತ್ತದೆ. ಸದರಿ ಕ್ರಮಕ್ಕೆ ಲೋಕೋಪಯೋಗಿ ಇಲಾಖೆಯಲ್ಲಿ ಇಚ್ಛಾಪತ್ರ / ಅಭಿಮತ ಸಲ್ಲಿಸಿದ್ದನ್ನು ಪರಿಗಣಿಸಿ ಶಾಶ್ವತವಾಗಿ ಸೇವೆ ನೀಡುವ ಯಾವುದೇ ಅಧಿಕಾರಿ / ಸಿಬ್ಬಂದಿಗಳು ಆಕ್ಷೇಪಣೆ ಮಾಡತಕ್ಕದ್ದಲ್ಲವೆಂದು ಸ್ಪಷ್ಟಪಡಿಸಿದೆ.

9) ಯಾವುದೇ ಅಭಿಮತ ಸಲ್ಲಿಸದೆ ಇರುವ ಅಧಿಕಾರಿ / ನೌಕರರುಗಳನ್ನು ಅವರುಗಳು ನೇಮಕಾತಿ ಹೊಂದಿದ ಇಲಾಖೆಯಲ್ಲಿಯೇ ಶಾಶ್ವತವಾಗಿ ಮುಂದುವರೆಸಲಾಗಿದೆ.

10) ಸದರಿ ಸಹಾಯಕ ಇಂಜಿನಿಯರ್ (ವಿಭಾಗ-2) ವೃಂದದ ಅಧಿಕಾರಿಗಳು ಶಾಶ್ವತ ವರ್ಗಾವಣೆ ಹೊಂದುವ ಪೂರ್ವದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳದಲ್ಲಿ ಅವರುಗಳ ವಿರುದ್ಧ ಹೂಡಲಾದ ಯಾವುದೇ ಇಲಾಖಾ ವಿಚಾರಣೆ, ಲೋಕಾಯುಕ್ತ ಪ್ರಕರಣ, ಶಿಸ್ತು ಪ್ರಕರಣ, ಎ.ಸಿ.ಬಿ ಪ್ರಕರಣ ಅಥವಾ ಕ್ರಿಮಿನಲ್ ಪ್ರಕರಣಗಳಲ್ಲಿ ಭಾಗಿಯಾಗಿದ್ದಲ್ಲಿ ಅವುಗಳು ಅಸ್ತಿತ್ವವು ಜಾರಿಯಲ್ಲಿರುತ್ತವೆ, ಹಾಗೂ ಸದರಿ ಪ್ರಕರಣಗಳಲ್ಲಿನ ಅಂತಿಮ ತೀರ್ಪಿನ ಮೇರೆಗೆ ಸರ್ಕಾರವು ನಿಯಮಾನುಸಾರ ಕೈಗೊಳ್ಳುವ ತೀರ್ಮಾನಕ್ಕೆ ಬದ್ಧರಾಗಿರುತ್ತಾರೆ.

11) ಅಧಿಕಾರಿ / ನೌಕರರುಗಳು ಮೇಲ್ಕಂಡಂತೆ ಇಲಾಖೆಗಳಿಗೆ ಸಲ್ಲಿಸಿದ ಅಭಿಮತ ಇಚ್ಛಾಪತ್ರಗಳಂತೆ, ಹಂಚಿಕೆ ಮಾಡಿದ ದಿನಾಂಕದ ನಂತರದ ಅವಧಿಯಲ್ಲಿ ವಿವಿಧ ಕಾರಣಗಳ ಮೇರೆಗೆ ಅಭಿಮತಗಳನ್ನು ಸಲ್ಲಿಸದೇ ಇರುವ ಅಥವಾ ನಂತರದ ಅವಧಿಯಲ್ಲಿ ಸಲ್ಲಿಸಿರುವಂತಹ ಅಭಿಮತಗಳನ್ನು ಪರಿಗಣಿಸಬೇಕಾದಲ್ಲಿ ಅಂತಹ ಅಧಿಕಾರಿ / ನೌಕರರ ಜ್ಯೇಷ್ಠತೆಯನ್ನು ಅವರ ಸೇವೆಯನ್ನು ಅಭಿಮತ ಸಲ್ಲಿಸಿದ ಇಲಾಖೆಗೆ ವಿಲೀನಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಕಾಯ್ದುಕೊಳ್ಳುವುದು.

12) ಮೇಲ್ಕಂಡ ಷರತ್ತುಗಳೊಂದಿಗೆ ಇಲಾಖೆಗಳ ಬೇರ್ಪಡೆ ಕುರಿತು ಈಗಾಗಲೇ ರಚಿಸಿರುವ ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿನ ಸಮಿತಿಯ ಮಾರ್ಗಸೂಚಿಗಳನ್ನು ಸಹಾ ಅಳವಡಿಸಿಕೊಳ್ಳುವ ಷರತ್ತಿಗೊಳಪಟ್ಟಿರುತ್ತದೆ.ಹಾಗೂ ಲೋ.ಇ. 216 ಸೇಸಕಿ 2018 (ಭಾಗ-1) ದಿನಾಂಕ:17-10-2020ರ ಸರ್ಕಾರದ ಪತ್ರದಲ್ಲಿ ಅಧಿಕಾರಿ/ಸಿಬ್ಬಂದಿಗಳ ವೃಂದ ನಿರ್ವಹಣಾ ಪ್ರಾಧಿಕಾರ ಹಾಗೂ ಸಕ್ಷಮ ಪ್ರಾಧಿಕಾರವು ಇಲಾಖಾ ಮುಖ್ಯಸ್ಥರಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ)ಬೆಂಗಳೂರು ರವರು ಆಗಿರುವುದರಿಂದ ಜಲಸಂಪನ್ಮೂಲ ಇಲಾಖೆ, ಹಾಗೂ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗಳಿಗೆ ವಿಲೀನಗೊಳ್ಳಲು ಅಭಿಮತ ವ್ಯಕ್ತಪಡಿಸಿರುವ ಗ್ರೂಪ್ ಬಿ, ಗ್ರೂಪ್ ಸಿ ಮತ್ತು ಗ್ರೂಪ್ ಡಿ ವೃಂದದ ಅಧಿಕಾರಿ/ಸಿಬ್ಬಂದಿಗಳ ಸೇವೆಯನ್ನು ಸಂಬಂದಪಟ್ಟ ಇಲಾಖೆಗೆ ನೀಡುವ ಕುರಿತು ಪರಿಶೀಲಿಸಿ ಅಧಿಕಾರಿ/ಸಿಬ್ಬಂದಿಗಳ ಜೇಷ್ಠತೆಯನ್ನು ಅವರುಗಳು ಲೋಕೋಪಯೋಗಿ ಇಲಾಖೆಯಲ್ಲಿ ಹೊಂದಿದ ಜೇಷ್ಠತೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮಾವಳಿಗಳು 1957 ನಿಯಮ 6 ರ ಪರಂತುಕ(1) ರನ್ವಯ ಅವರುಗಳ ಅಂತರ್ ಜೇಷ್ಠತೆಯನ್ನು ಜಲಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಇಲಾಖೆಗಳು ಕಾಯ್ದುಕೊಂಡು ಅಧಿಕಾರಿ/ ನೌಕರರ ಸೇವೆಯನ್ನು ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977 ರ ನಿಯಮ 16 (ಎ) (ii) ರನ್ವಯ ಶಾಶ್ವತ ವರ್ಗಾವಣೆ ಮುಖೇನ ವರ್ಗಾಯಿಸಲು ಸೂಕ್ತ ಆದೇಶವನ್ನು ಹೊರಡಿಸಲು ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.

ಮುಂದುವರೆದು ಗ್ರೂಪ್ ಎ ವೃಂದದ ಅಧಿಕಾರಿಗಳ ಸೇವೆಯನ್ನು ಜಲಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ವಶಕ್ಕೆ ನೀಡುವ ಕುರಿತು ಸರ್ಕಾರದಲ್ಲಿ ಹೊರಡಿಸಿರುವ ಆದೇಶದಲ್ಲಿನ ಷರತ್ತು ಮತ್ತು ನಿಬಂದನೆಗಳನ್ನು ಗ್ರೂಪ್ ಬಿ, ಮತ್ತು ಗ್ರೂಪ್ ಸಿ ಹಾಗೂ ಗ್ರೂಪ್ ಡಿ ವೃಂದದ ಅಧಿಕಾರಿ/ನೌಕರರುಗಳ ಸೇವೆಯನ್ನು ಜಲಸಂಪನ್ಮೂಲ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗಳಿಗೆ ನೀಡುವ ಪ್ರಕ್ರಿಯೆಗೆ ಅಳವಡಿಸಿಕೊಂಡು ಆದೇಶವನ್ನು ಹೊರಡಿಸಲು ನಿರ್ದೇಶಿಸಿರುವಂತೆ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟಿರುತ್ತದೆ.

(ಶಿವಯೋಗಿ ಹಿರೇಮಠ)
ಮುಖ್ಯ ಇಂಜಿನಿಯರ್,
ಸಂಪರ್ಕ ಮತ್ತು ಕಟ್ಟಡಗಳು (ದ),
ಬೆಂಗಳೂರು.
20/10/2020

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 291 |
| 2 | ಸದಸ್ಯರ ಹೆಸರು | ಶ್ರೀ ರೇವಣ್ಣ ಹೆಚ್.ಡಿ. (ಹೊಳೆನರಸೀಪುರ) |
| 3 | ಉತ್ತರಿಸಬೇಕಾದ ದಿನಾಂಕ | 12.09.2022 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೊಳೆನರಸೀಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಹೊಳೆ ನರಸೀಪುರ, ಹಾಸನ ಮತ್ತು ಚನ್ನರಾಯಪಟ್ಟಣ ತಾಲ್ಲೂಕು ಕಛೇರಿಗಳಲ್ಲಿ ಭೂಮಾಪಕರ ಹುದ್ದೆಗಳು ಹಲವಾರು ವರ್ಷಗಳಿಂದ ಖಾಲಿಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಂಜೂರಾದ, ಭರ್ತಿಯಾದ ಖಾಲಿಯಿರುವ ಹುದ್ದೆವಾರು, ತಾಲ್ಲೂಕುವಾರು ವಿವರ ನೀಡುವುದು) | ಬಂದಿದೆ.<br><br>ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ ತಾಲ್ಲೂಕುಗಳಲ್ಲಿ ಮಂಜೂರಾದ, ಭರ್ತಿಯಾದ ಹಾಗೂ ಖಾಲಿಯಿರುವ ಭೂಮಾಪಕರು ಹುದ್ದೆಗಳ ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ..<br><br>**ತಾಲ್ಲೂಕು** / **ಮಂಜೂರಿ** / **ಭರ್ತಿ** / **ಖಾಲಿ**<br>ಹೊಳೆನರಸೀಪುರ / 17 / 15 / 2<br>ಹಾಸನ / 30 / 25 / 5<br>ಚನ್ನರಾಯಪಟ್ಟಣ / 30 / 24 / 6<br>ಒಟ್ಟು / 77 / 64 / 13 |
| ಆ) | ಹಾಗಿದ್ದಲ್ಲಿ, ಹೊಳೆನರಸೀಪುರ ತಾಲ್ಲೂಕಿನಲ್ಲಿ ಬಾಕಿಯಿರುವ ಹದ್ದುಬಸ್ತು ಪ್ರಕರಣಗಳು ಇ-ಸ್ವತ್ತು, ಕೋರ್ಟ್ ಡಿಕ್ರಿ ಪ್ರಕರಣಗಳು ಮತ್ತು ಇತರೆ ಪ್ರಕರಣಗಳು ಇತ್ಯರ್ಥಗೊಳ್ಳಲು ಸುಮಾರು 2 ರಿಂದ 3 ವರ್ಷಕ್ಕೂ ಅಧಿಕ ಕಾಲವಾಗುತ್ತಿದ್ದು, ಇದರಿಂದಾಗಿ ರೈತರಿಗೆ ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಹೊಳೆನರಸೀಪುರ, ಹಾಸನ ಮತ್ತು ಚನ್ನರಾಯಪಟ್ಟಣ ತಾಲ್ಲೂಕುಗಳಿಗೆ ಮಂಜೂರಾದ, ಭರ್ತಿಯಾದ ಖಾಲಿಯಿರುವ ತಪಾಸಕರ ಹುದ್ದೆಗಳ ವಿವರ ಈ ಕೆಳಕಂಡಂತಿದೆ.<br><br>**ತಾಲ್ಲೂಕು** / **ಮಂಜೂರಿ** / **ಭರ್ತಿ** / **ಖಾಲಿ**<br>ಹೊಳೆನರಸೀಪುರ / 3 / 0 / 3<br>ಹಾಸನ / 5 / 3 / 2<br>ಚನ್ನರಾಯಪಟ್ಟಣ / 3 / 2 / 1 |
| ಇ) | ಬಂದಿದ್ದಲ್ಲಿ, ಹೊಳೆನರಸೀಪುರ, ಹಾಸನ ಮತ್ತು ಚನ್ನರಾಯಪಟ್ಟಣ ತಾಲ್ಲೂಕು ಕಛೇರಿಗಳಲ್ಲಿ ಹಲವಾರು ವರ್ಷಗಳಿಂದ ಖಾಲಿ ಇರುವ ಪರ್ಯಾವೇಕ್ಷಕರು ಮತ್ತು ಭೂಮಾಪಕರ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಇಲಾಖೆಯಲ್ಲಿ ಖಾಲಿ ಇರುವ ಪರ್ಯಾವೇಕ್ಷಕರು ಹಾಗೂ ಭೂಮಾಪಕರು ಹುದ್ದೆಗಳನ್ನು ಮುಂಬಡ್ತಿ ಮತ್ತು ನೇರ ನೇಮಕಾತಿಯಿಂದ ಭರ್ತಿ ಮಾಡಲು ನಿಯಮಾನುಸಾರ ಕ್ರಮ ವಹಿಸಲಾಗುತ್ತಿದೆ. ಅಲ್ಲದೆ, ಜಿಲ್ಲಾವಾರು ಪರವಾನಗಿ ಭೂಮಾಪಕರನ್ನು ಸಹ ನೇಮಕಾತಿ ಮಾಡಿಕೊಂಡಿದ್ದು, ಪ್ರಸ್ತುತ ತಾಲ್ಲೂಕಿನಲ್ಲಿ ಲಭ್ಯವಿರುವ ಪರ್ಯಾವೇಕ್ಷಕರು, ಭೂಮಾಪಕರು ಹಾಗೂ ಪರವಾನಗಿ ಭೂಮಾಪಕರಿಂದ ಸಾರ್ವಜನಿಕರಿಗೆ ತೊಂದರೆಯಾಗದಂತೆ ಅಳತೆ, ಹದ್ದುಬಸ್ತು ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ. |

**ಸಂಖ್ಯೆ: ಕಂಇ 175 ಎಸ್ಎಸ್‌ಸಿ 2022**

(**ಆರ್.ಅಶೋಕ**)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 292
2. ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ.ಸಿ.ಎನ್. (ಶ್ರವಣಬೆಳಗೊಳ)
3. ಉತ್ತರಿಸುವ ದಿನಾಂಕ : 12-09-2021
4. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಈ ಹಿಂದೆ ಹಾಸನ ನಗರದಲ್ಲಿ ಸುಮಾರು 100 ವರ್ಷಗಳಷ್ಟು ಹಳೆಯದಾದ ಬಂದೀಖಾನೆ ಇದ್ದು, ಈ ಬಂದಿಖಾನೆಯ ಬದಲಿಗೆ ಹಾಸನ ನಗರದ ಹೊರವಲಯದ ಗಾಡೇನಹಳ್ಳಿ ಗ್ರಾಮದ ಸರ್ವೆ ನಂಬರ್ 488 ರಲ್ಲಿ ಹೊಸದಾಗಿ ಬಂದೀಖಾನೆ ನಿರ್ಮಿಸಲು 40 ಎಕರೆ ಜಮೀನನ್ನು ಮಂಜೂರು ಮಾಡಲಾಗಿದ್ದು, ಈ 40 ಎಕರೆ ಜಾಗವು ಬಂದೀಖಾನೆ ಇಲಾಖೆ ವಶದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: (ಸಂಪೂರ್ಣ ಮಾಹಿತಿ ನೀಡುವುದು) | - ಹೌದು -<br><br>ಸರ್ಕಾರವು ಆದೇಶ ಸಂಖ್ಯೆ:ಆರ್ ಡಿ 34 ಎಲ್ ಜಿ ಹೆಚ್ 2018, ದಿನಾಂಕ:25.01.2019 ರಲ್ಲಿ ಬಂಧೀಖಾನೆ ನಿರ್ಮಾಣಕ್ಕೆ 40 ಎಕರೆ ಜಮೀನು ಮಂಜೂರಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಸದರಿ ಜಾಗವನ್ನು ಬಂದೀಖಾನೆಯ ಇನ್ಸ್ ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರು ಸ್ಥಳ ಪರಿಶೀಲನೆ ಮಾಡಿ ಬಂದೀಖಾನೆ ನಿರ್ಮಿಸಲು ಸೂಕ್ತ ಸ್ಥಳವೆಂದು ವರದಿ ನೀಡಿರುವುದು ನಿಜವೇ: (ಸಂಪೂರ್ಣ ಮಾಹಿತಿ ನೀಡುವುದು) | - ಹೌದು - |
| ಇ) | ಲೋಕೋಪಯೋಗಿ ಇಲಾಖೆಯಿಂದ ಹೊಸ ಬಂದಿಖಾನೆಯನ್ನು ನಿರ್ಮಿಸಲು ರೂ.198.00 ಕೋಟಿಗಳ ಅಂದಾಜನ್ನು ತಯಾರಿಸಿ, ಸರ್ಕಾರಕ್ಕೆ ಸಲ್ಲಿಸಿರುವುದು ನಿಜವೇ; ಹಾಗೂ ಲೋಕೋಪಯೋಗಿ ಇಲಾಖೆಯ ತಾಂತ್ರಿಕ ಸಲಹಾ ಸಮಿತಿಯು ಸದರಿ ಪ್ರಸ್ತಾವನೆಗೆ ಅನುಮತಿ ನೀಡಿರುವುದು ನಿಜವೇ | - ಹೌದು –<br><br>ಲೋಕೋಪಯೋಗಿ ಇಲಾಖೆಯಿಂದ ರೂ.198.00 ಕೋಟಿಗಳ ಅಂದಾಜು ಪಟ್ಟಿಯನ್ನು ತಯಾರಿಸಲಾಗಿದ್ದು, ಸದರಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಮತ್ತು ಕರ್ನಾಟಕ ಕಾರಾಗೃಹಗಳ ಹಾಗೂ ಸದರಿ ಕಾಮಗಾರಿಯ ಅಂದಾಜು ಪಟ್ಟಿಗೆ ಸಲಹಾ ಸಮಿತಿಯು ದಿನಾಂಕ:22.12.2018 ರಂದು ಅನುಮತಿ ನೀಡಿರುತ್ತದೆ. |

| | | |
|---|---|---|
| ಈ) | ಹಾಗಿದ್ದಲ್ಲಿ, ಹೊಸ ಬಂದೀಖಾನೆಯನ್ನು ನಿರ್ಮಿಸುವ ಕಾಮಗಾರಿ ಪ್ರಸ್ತುತ ಯಾವ ಹಂತದಲ್ಲಿದೆ: ಸದರಿ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಕೈಗೆತ್ತಿಕೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿ,. ಇವರಿಂದ ಹಾಸನದ ಹೊಸ ಬಂದೀಖಾನೆಯ ವಸತೀಯೇತರ ಕಟ್ಟಡ ಮತ್ತು ರಸ್ತೆಗಳ ನಿರ್ಮಾಣಕ್ಕೆ ರೂ.99.00 ಕೋಟಿ ವೆಚ್ಚದಲ್ಲಿ ಅಂದಾಜು ಪಟ್ಟಿ ಮತ್ತು ನಕ್ಷೆಯನ್ನು ಪಡೆದು ಸದರಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು ಪರಿಶೀಲನೆಯಲ್ಲಿದೆ. |

ಸಂಖ್ಯೆ: ಹೆಚ್ ಡಿ 165 ಪಿಆರ್ಎ 2022

(ಆರಗ ಜ್ಞಾನೇಂದ್ರ)
ಗೃಹ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 293 |
| ಸದಸ್ಯರ ಹೆಸರು : | ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) |
| ಉತ್ತರಿಸಬೇಕಾದ ದಿನಾಂಕ: | 12-09-2022 |
| ಉತ್ತರಿಸಬೇಕಾದ ಸಚಿವರು : | ಮಾನ್ಯ ಕಂದಾಯ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನದ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಸರ್ಕಾರದ ವಿವಿಧ ಯೋಜನೆಗಳಿಗೆ ಭೂಮಿಯನ್ನು ಕಳೆದುಕೊಂಡಿರುವ ಸಂತ್ರಸ್ಥರು ಹೆಚ್ಚಿನ ಪರಿಹಾರ ಕೋರಿ ಸಲ್ಲಿಸಿರುವ ಪ್ರಕರಣಗಳೆಷ್ಟು; ವಿಲೇಯಾಗಿರುವ ಪ್ರಕರಣಗಳೆಷ್ಟು; ವಿಲೇಯಾಗದೆ ಬಾಕಿ ಇರುವ ಪ್ರಕರಣಗಳೆಷ್ಟು; ವಿಲೇ ಆಗದೆ ಬಾಕಿ ಇರಲು ಕಾರಣಗಳೇನು; (ಯೋಜನೆಗಳವಾರು ಸಂಪೂರ್ಣ ಮಾಹಿತಿ ನೀಡುವುದು) | ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಹಾಸನ ಇಲ್ಲಿ ಸರ್ಕಾರದ ವಿವಿಧ ಯೋಜನೆಗಳಿಗೆ ಭೂಮಿಯನ್ನು ಕಳೆದುಕೊಂಡಿರುವ ಸಂತ್ರಸ್ಥರುಗಳು ಹೆಚ್ಚಿನ ಪರಿಹಾರಕ್ಕಾಗಿ ವಿವಿಧ ನ್ಯಾಯಾಲಯಗಳಲ್ಲಿ ಒಟ್ಟು 2272 ಪ್ರಕರಣಗಳು ದಾಖಲಾಗಿರುತ್ತವೆ. ಸದರಿ ಪ್ರಕರಣಗಳ ಪೈಕಿ 1125 ಪ್ರಕರಣಗಳು ಲೋಕ್ ಅದಾಲತ್‌ನಲ್ಲಿ ಇತ್ಯರ್ಥಪಡಿಸಲಾಗಿದೆ. ಇತ್ಯರ್ಥಕ್ಕೆ ಬಾಕಿ ಇರುವ 1147 ಪ್ರಕರಣಗಳ ಪೈಕಿ 379 ಪ್ರಕರಣಗಳು ವಿವಿಧ ನ್ಯಾಯಾಲಯದಲ್ಲಿದ್ದು, (25 ಪ್ರಕರಣಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಹಾಗೂ 85 ಪ್ರಕರಣಗಳಲ್ಲಿ ಜಿಲ್ಲಾ ನ್ಯಾಯಾಲಯಗಳಲ್ಲಿ ಕಾವೇರಿ ನೀರಾವರಿ ನಿಗಮವು ಮೇಲ್ಮನವಿ ಸಲ್ಲಿಸಿರುತ್ತದೆ. 269 ಪ್ರಕರಣಗಳಲ್ಲಿ ಮೇಲ್ಮನವಿ ಸಲ್ಲಿಸಲು ಕ್ರಮವಹಿಸಲಾಗುತ್ತಿದೆ).<br>ಉಳಿದಂತೆ 768 ಪ್ರಕರಣಗಳು ವಿವಿಧ ಹಂತದಲ್ಲಿ ಬಾಕಿ ಇರುತ್ತವೆ. ವಿವರ ಕೆಳಕಂಡಂತಿದೆ. |

| ಕ್ರ ಸಂ. | ಯೋಜನೆ | ಹೆಚ್ಚಿನ ಪರಿಹಾರಕ್ಕಾಗಿ ವಿವಿಧ ಹಂತದಲ್ಲಿರುವ ಪ್ರಕರಣಗಳು |
|---|---|---|
| 1 | ಹೇಮಾವತಿ | 303 |
| 2 | ಯಗಚಿ | 416 |
| 3 | ಹಾರಂಗಿ | 49 |
| 4 | ವಾಟೆಹೊಳೆ | 0 |
| | **ಒಟ್ಟು** | **768** |

| | | |
|---|---|---|
| ಆ) | ಹಾಗಿದ್ದಲ್ಲಿ, ಸಂತ್ರಸ್ಥರು ಹೆಚ್ಚಿನ ಪರಿಹಾರ ಕೋರಿ ಸಲ್ಲಿಸಿರುವ ಪ್ರಕರಣಗಳಲ್ಲಿ ನ್ಯಾಯಾಲಯದಲ್ಲಿ ಬಾಕಿ ಇರುವ ಪ್ರಕರಣಗಳೆಷ್ಟು; (ಯೋಜನೆಗಳವಾರು ಸಂಪೂರ್ಣ ಮಾಹಿತಿ ನೀಡುವುದು) | ಒಟ್ಟು ಬಾಕಿ ಇರುವ 768 ಪ್ರಕರಣಗಳ ಪೈಕಿ 516 ಪ್ರಕರಣಗಳು ಎಲ್.ಎ.ಸಿ / ಜಾರಿ ಪ್ರಕರಣಗಳಾಗಿದ್ದು, ಈ ಪ್ರಕರಣಗಳನ್ನು ದಿನಾಂಕ:12-03-2022 ರಂದು ನಡೆಯಲಿರುವ ಲೋಕ್ ಅದಾಲತ್‌ನಲ್ಲಿ ಇತ್ಯರ್ಥಪಡಿಸಿಕೊಳ್ಳಲು ಉದ್ದೇಶಿಸಲಾಗಿದ್ದು, ಹಣ ಬಿಡುಗಡೆಗಾಗಿ ಕಾವೇರಿ ನೀರಾವರಿ ನಿಗಮಕ್ಕೆ ಪತ್ರ ಬರೆಯಲಾಗಿದೆ. ಉಳಿದ 252 ಪ್ರಕರಣಗಳು ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿ ಬಾಕಿ ಇರುತ್ತವೆ. ಯೋಜನಾವಾರು ಪ್ರಕರಣಗಳ ವಿವರ ಕೆಳಕಂಡಂತಿದೆ. |
| ಇ) | ಕೆಲವು ಪ್ರಕರಣಗಳಲ್ಲಿ ಶೇಕಡ 250 ಕ್ಕೂ ಅಧಿಕ ಪರಿಹಾರವನ್ನು ನಿಗಧಿಪಡಿಸಿ ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳ ನಷ್ಟವುಂಟು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅಂತಹವರ ವಿರುದ್ಧ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಅಧಿಕ ಪರಿಹಾರವನ್ನು ನಿಗಧಿಪಡಿಸಿರುವ ಒಟ್ಟು 648 ಪ್ರಕರಣಗಳ ಪೈಕಿ 379 ಪ್ರಕರಣಗಳಲ್ಲಿ ಈಗಾಗಲೇ 25 ಪ್ರಕರಣಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮತ್ತು 85 ಪ್ರಕರಣಗಳಲ್ಲಿ ಜಿಲ್ಲಾ ನ್ಯಾಯಾಲಯಗಳಲ್ಲಿ ಕಾವೇರಿ ನೀರಾವರಿ ನಿಗಮವು ಮೇಲ್ಮನವಿ ಸಲ್ಲಿಸಿರುತ್ತದೆ. ಉಳಿದ 269 ಪ್ರಕರಣಗಳಲ್ಲಿ ದಾಖಲಾತಿಗಳನ್ನು ಕ್ರೋಢೀಕರಿಸಿ ಮೇಲ್ಮನವಿ ಸಲ್ಲಿಸಲು ಕ್ರಮವಹಿಸಲಾಗುತ್ತಿದೆ. |

| ಕ್ರ ಸಂ | ಯೋಜನೆ | ಹೆಚ್ಚಿನ ಪರಿಹಾರಕ್ಕಾಗಿ ದಾಖಲಿಸಿರುವ ಪ್ರಕರಣಗಳು |
|---|---|---|
| 1 | ಹೇಮಾವತಿ | 145 |
| 2 | ಯಗಚಿ | 95 |
| 3 | ಹಾರಂಗಿ | 12 |
| 4 | ವಾಟೆಹೊಳೆ | 0 |
| | **ಒಟ್ಟು** | **252** |

**ಸಂಖ್ಯೆ: ಕಂಇ 24 ಭೂಸ್ವಾಹಾ 2022**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 294 |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಸದಸ್ಯರ ಹೆಸರು | : | ಶ್ರೀ ಬಾಲಕೃಷ್ಣ ಸಿ.ಎನ್(ಶ್ರವಣಬೆಳಗೊಳ) |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕಂದಾಯ ಇಲಾಖೆಯಲ್ಲಿ 2000ನೇ ಇಸವಿಯಿಂದ ಭೂಮಿ ತಂತ್ರಾಂಶದಡಿಯಲ್ಲಿ ರೈತರಿಗೆ ಸೇವೆಯನ್ನು ಒದಗಿಸಲಾಗುತ್ತಿದ್ದು, ಈ ಹಿಂದೆ ನಿರ್ವಹಿಸಿದಂತಹ ಕೈ ಬರಹದ ದಾಖಲೆಗಳಲ್ಲಿ ಕರಾರುವಕ್ಕಾದ ಮಾಹಿತಿ ದಾಖಲಿಸದೆ ಇರುವುದರಿಂದ 20 ವರ್ಷಗಳು ಕಳೆದರೂ ಸಹ<br><br>**(ಎ)** ಕಾಲಂ 3 ಮತ್ತು 9 ರಲ್ಲಿನ ವ್ಯತ್ಯಾಸ<br>**(ಬಿ)** ಆಕಾರ್ ಬಂದ್ ನಂತೆ ಕಾಲಂ 3 ಮತ್ತು 9 ರಲ್ಲಿನ ವ್ಯತ್ಯಾಸ<br><br>**(ಸಿ)** ಹಲವಾರು ಅನಧಿಕೃತ ದಾಖಲೆಗಳನ್ನು ಸೃಷ್ಟಿಸಿರುವುದು ಯಾವುದೇ ಮಂಜೂರಾತಿ ಮತ್ತು ಸಕ್ಷಮ ಪ್ರಾಧಿಕಾರ ಆದೇಶ ಇಲ್ಲದೇ ಕಾಲಂ 9 ರಲ್ಲಿ ಸೇರ್ಪಡೆ ಮಾಡಿರುವುದು ಇತ್ಯಾದಿ ಸಮಸ್ಯೆಗಳನ್ನು ಭೂಮಿ ತಂತ್ರಾಂಶ ಎದುರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು). | ಸರ್ಕಾರದ ಆದೇಶ ಸಂಖ್ಯೆ: ಕಂ.ಇ 131 ಎಂ.ಆರ್.ಆರ್ 2022 ದಿನಾಂಕ: 22-03-2022 ರಂತೆ 1.ದಕ್ಷಿಣ ಕನ್ನಡ ಜಿಲ್ಲೆ, 2.ಬೆಂಗಳೂರು ಗ್ರಾಮಾಂತರ ಜಿಲ್ಲೆ, 3.ಬೆಂಗಳೂರು ನಗರ ಜಿಲ್ಲೆ, ಮತ್ತು 4.ಉಡುಪಿ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಜಿಲ್ಲೆಗಳಲ್ಲಿ ಪಹಣಿ ಲೋಪದೋಷಗಳನ್ನು ತ್ವರಿತಗತಿಯಲ್ಲಿ ಸರಿಪಡಿಸಲು ಪಹಣಿ ತಿದ್ದುಪಡಿ ಅಧಿಕಾರವನ್ನು ಕಂದಾಯ ಅದಾಲತ್ ಕಾರ್ಯಕ್ರಮದಡಿ ಸಹಾಯಕ ಆಯುಕ್ತರಿಂದ ತಹಶೀಲ್ದಾರ್ ರವರಿಗೆ ಪ್ರತ್ಯಾಯೋಜಿಸಿ ಆದೇಶಿಸಿದೆ<br>ಅದರಂತೆ ಭೂಮಿ ತಂತ್ರಾಂಶದಲ್ಲಿಯೂ ಸಹ ಅವಕಾಶ ಕಲ್ಪಿಸಿ ಸರಿಪಡಿಸಲು ಕ್ರಮವಹಿಸಿದೆ.<br><br>**(ಸಿ)** ಭೂಮಿ ಉಸ್ತುವಾರಿ ಕೋಶಕ್ಕೆ ಈ ರೀತಿಯ ಸಮಸ್ಯೆಗಳ ಬಗ್ಗೆ ಮನವಿಗಳು ಸ್ವೀಕೃತವಾಗಿರುವುದಿಲ್ಲ.<br>ಇಂತಹ ಪ್ರಕರಣಗಳು ಕಂಡುಬಂದ್ದಲ್ಲಿ ಸಂಬಂಧಪಟ್ಟ ಉಪ ವಿಭಾಗಾಧಿಕಾರಿಗಳ ಹಂತದಲ್ಲಿ ಕ್ರಮ ಕೈಗೊಳ್ಳಲಾಗುವುದು. |
| ಆ | ಭೂಮಿ ಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗಣಕ ಯಂತ್ರಗಳು ಹಳೆಯದಾಗಿದ್ದು, ಪದೇ ಪದೇ ದುರಸ್ತಿಗೆ ಬರುತ್ತಿದ್ದು, ಇದರಿಂದ ಸಕಾಲದಲ್ಲಿ ಸಾರ್ವಜನಿಕರಿಗೆ / ರೈತರಿಗೆ ಉತ್ತಮ ಸೇವೆಯನ್ನು ಒದಗಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸ್ತುತ ಭೂಮಿ ಕೇಂದ್ರ ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗಣಕ ಯಂತ್ರಗಳು 2017-18 ನೇ ಸಾಲಿನಲ್ಲಿ ಒದಗಿಸಲಾಗಿದ್ದು, ಇವುಗಳ ಪರಿಪಕ್ವ ನಿರ್ವಹಣೆಗೆ ಜಿಲ್ಲಾಮಟ್ಟದಲ್ಲಿ ಓರ್ವ ಹಾರ್ಡ್‌ವೇರ್ ಇಂಜಿನಿಯರ್ ನೇಮಕ ಮಾಡಲಾಗಿರುತ್ತದೆ. |

--2--

| | | |
|---|---|---|
| ಇ | ಭೂಮಿ ಶಾಖೆಯಲ್ಲಿ ನೆಟ್‌ವರ್ಕ್ ಕೇಬಲ್‌ಗಳ ವೈರಿಂಗ್ ವ್ಯವಸ್ಥೆಯನ್ನು ಸುವ್ಯವಸ್ಥಿತಗೊಳಿಸಲು ಹಾಗೂ ಹೊಸದಾಗಿ ಯು.ಪಿ.ಎಸ್ ಅಳವಡಿಸಲು ಮತ್ತು ಎ.ಜೆ.ಎಸ್.ಕೆ.., ಭೂಮಿ ಶಾಖೆ, ಕಛೇರಿ ಒಳಗೊಂಡಂತೆ 5 ಕೆ.ವಿ. ರಿಂದ 6 ಕೆ.ವಿ. ಜನರೇಟರ್ ಸಿಸ್ಟಂನ್ನು ಅಳವಡಿಸಲು ಮತ್ತು ಭೂಮಿ ಶಾಖೆಗೆ ಒದಗಿಸಿರುವ ವ್ಯವಸ್ಥೆಯನ್ನು ಬಲಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದ ಎಲ್ಲಾ ಭೂಮಿ ಕೇಂದ್ರಗಳಿಗೆ ಯು.ಪಿ.ಎಸ್ (3 ಕೆ.ವಿ.) ಒದಗಿಸಲಾಗಿದ್ದು ಇವುಗಳ ಪರಿಪಕ್ವ ನಿರ್ವಹಣೆಗಾಗಿ ಜಿಲ್ಲಾಮಟ್ಟದಲ್ಲಿ ಓರ್ವ ಹಾರ್ಡ್‌ವೇರ್ ಇಂಜಿನಿಯರ್ ನೇಮಕ ಮಾಡಿ ನಿರ್ವಾಹಣೆ ಮಾಡಲಾಗಿರುತ್ತದೆ. |
| ಈ | ಸ್ವಾತ್ರಂತ್ಯ ಬಂದಾಗಿನಿಂದಲೂ ಪೋಡಿ ಪ್ರಕ್ರಿಯೇ ಜಾರಿಯಲ್ಲಿದ್ದು, ಮಂಜೂರಿ ಕಡತಗಳು ಲಭ್ಯವಿಲ್ಲದೆ ಇರುವುದರಿಂದ ಪೋಡಿ ಕೆಲಸ ಸುಗಮವಾಗಿ ನಡೆಯದೆ, ಖಾತೆ ಬದಲಾವಣೆಗೆ ತೊಂದರೆಯಾಗಿದ್ದು, ಪ್ರಸ್ತುತ ಸರ್ಕಾರ ನಮೂನೆ 1 ರಿಂದ 5 ನ್ನು ಭರ್ತಿ ಮಾಡಿ ಲಭ್ಯವಿಲ್ಲದ ಕಡತಗಳಿಗೆ ಗೈರು ಕಡತ (ಮಿಸ್ಸಿಂಗ್ ರೆಕಾರ್ಡ್) ತಯಾರು ಮಾಡಲು ಅನುಮತಿ ನೀಡಲಾಗಿದ್ದು, ಇದರಿಂದಾಗಿ ಸಾರ್ವಜನಿಕರಿಗೆ, ರೈತರಿಗೆ ಯಾವುದೇ ಅನುಕೂಲವಾಗದೆ ಮತ್ತು ಪೋಡಿಯಾಗದೆ, ರೈತರು ತಮ್ಮ ಜಮೀನುಗಳನ್ನು ಕಷ್ಟಕಾರ್ಪಣ್ಯಗಳಿಗೆ ಮಾರಾಟ ಮಾಡಲಾಗದೆ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 136(3) ರ ಅಡಿಯಲ್ಲಿ ಮೂಲ ಮಂಜೂರಿ ಕಡತದ ನೈಜತೆಯನ್ನು ಖಾತ್ರಿಪಡಿಸಿಕೊಂಡು ಗೈರು ವಿಲೆ ಕಡತವನ್ನು ತಯಾರಿಸಿ ನಂತರ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 67(2)ರ ಅಡಿಯಲ್ಲಿ ಸಕ್ಷಮ ಪ್ರಾಧಿಕಾರದ ಸೂಕ್ತ ಆದೇಶದೊಂದಿಗೆ ಪೋಡಿ ದುರಸ್ತಿ ಕ್ರಮ ಕೈಗೊಳ್ಳಲು ಸುತ್ತೋಲೆ ಸಂಖ್ಯೆ: ಕಂಇ 08 ಎಲ್.ಜಿ.ಪಿ. 2016; ದಿನಾಂಕ:20.06.2016ರ ಸುತ್ತೋಲೆಯಂತೆ ಕ್ರಮ ಕೈಗೊಳ್ಳಲು ನಿರ್ದೇಶನ ನೀಡಲಾಗಿದೆ. |

| | | |
|---|---|---|
| ಉ | ರಾಜ್ಯದಲ್ಲಿ ಅಕ್ರಮ-ಸಕ್ರಮದ ಅಡಿಯಲ್ಲಿ ಫಾರಂ 53 ಮತ್ತು 57 ಅರ್ಜಿಗಳನ್ನು ವಿಲೇವಾರಿ ಮಾಡಲು ಬಾಕಿ ಇರುವ ಪ್ರಕರಣಗಳು ಎಷ್ಟು; ಈ ಅರ್ಜಿಗಳನ್ನು ವಿಲೇವಾರಿ ಮಾಡಲು ಸರ್ವೋಚ್ಚ ನ್ಯಾಯಾಲಯ ನೀಡಿರುವ ಆದೇಶದ ಮಾನದಂಡಗಳನ್ನು ಪಾಲಿಸಲಾಗುತ್ತಿದೆಯೇ; (ಮೇಲ್ಕಂಡ ಮಾನದಂಡಗಳನ್ನು ಪಾಲಿಸಿದ್ದಲ್ಲಿ, ಸರ್ವೋಚ್ಚ ನ್ಯಾಯಾಲಯ ನೀಡಿರುವ ಆದೇಶದನ್ವಯ ವಿಲೇವಾರಿಯಾದ ಒಟ್ಟು ಪ್ರಕರಣಗಳ ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಅಕ್ರಮ-ಸಕ್ರಮದಡಿಯಲ್ಲಿ ನಮೂನೆ-53 ಮತ್ತು ನಮೂನೆ-57 ರಡಿಯಲ್ಲಿ ಮಂಜೂರಾಗಿರುವ ಮತ್ತು ಬಾಕಿ ಇರುವ ಪ್ರಕರಣ ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| ಊ | ಹಾಗಿದ್ದಲ್ಲಿ, ಈ ಅರ್ಜಿಗಳನ್ನು ವಿಲೇವಾರಿ ಮಾಡಲು ರೈತರು ಎಷ್ಟು ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದಾರೆ ಎಂಬುದನ್ನು ಖಾತ್ರಿ ಪಡಿಸಿಕೊಳ್ಳಲು ಯಾವ ವೈಜ್ಞಾನಿಕ ಕ್ರಮಗಳನ್ನು ಈವರೆಗೆ ಅನುಸರಿಸಲಾಗುತ್ತಿದೆ; ಉಪಗ್ರಹ ಆಧಾರಿತ ಸರ್ವೆ ಹಾಗೂ ಮತ್ಯಾವ ವೈಜ್ಞಾನಿಕ ಕ್ರಮಗಳನ್ನು ಅನುಸರಣೆ ಮಾಡಲಾಗುತ್ತಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | ರೈತರು ಎಷ್ಟು ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದಾರೆ ಎಂಬುದನ್ನು ಖಾತ್ರಿ ಪಡಿಸಿ ಕೊಳ್ಳಲು ಸಾಂಪ್ರದಾಯಿಕವಾಗಿ ಗ್ರಾಮ ಲೆಕ್ಕಾಧಿಕಾರಿ, ರಾಜಸ್ವ ನಿರೀಕ್ಷಕರು, ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಗ್ರಾಮಸ್ಥರ ಮಹಜರ್ ನಡೆಸಿ ಕ್ರಮ ವಹಿಸಲಾಗುತ್ತಿದೆ. |

ಕಂಇ 276 ಎಂಆರ್‌ಆರ್ 2022

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಕಲಂ 94-ಎ(4) ರಡಿಯಲ್ಲಿ ನಮೂನೆ 57 ಅರ್ಜಿಗಳ ಪ್ರಗತಿ ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಸ್ವೀಕರಿಸಿದ ಅರ್ಜಿಗಳು ಸಂಖ್ಯೆ | ಸಕ್ರಮ ಅರ್ಜಿಗಳ ಸಂಖ್ಯೆ | ತಿರಸ್ಕೃತ ಅರ್ಜಿಗಳ ಸಂಖ್ಯೆ | ಒಟ್ಟು ವಿಲೇವಾರಿಯಾದ ಅರ್ಜಿಗಳ ಸಂಖ್ಯೆ | ಬಾಕಿ ಅರ್ಜಿಗಳ ಸಂಖ್ಯೆ |
|---|---|---|---|---|---|---|
| 1 | ಬೆಂಗಳೂರು ನಗರ | 3809 | 0 | 3809 | 3809 | 0 |
| 2 | ಬೆಂಗಳೂರು ಗ್ರಾಮಾಂತರ | 18017 | 0 | 1043 | 1043 | 16974 |
| 3 | ಕೋಲಾರ | 44644 | 16 | 3104 | 3120 | 41524 |
| 4 | ಚಿಕ್ಕಬಳ್ಳಾಪುರ | 39397 | 0 | 2457 | 2457 | 36940 |
| 5 | ರಾಮನಗರ | 24488 | 80 | 6376 | 6456 | 18032 |
| 6 | ಶಿವಮೊಗ್ಗ | 85810 | 20 | 8855 | 8875 | 76935 |
| 7 | ಚಾಮರಾಜನಗರ | 12954 | 0 | 2308 | 2308 | 10646 |
| 8 | ಉಡುಪಿ | 38993 | 0 | 1241 | 1241 | 37752 |
| 9 | ಹಾಸನ | 91716 | 70 | 22571 | 22641 | 69075 |
| 10 | ಉತ್ತರ ಕನ್ನಡ | 1932 | 73 | 1003 | 1076 | 856 |
| 11 | ಮಂಡ್ಯ | 25911 | 0 | 1900 | 1900 | 24011 |
| 12 | ದಕ್ಷಿಣ ಕನ್ನಡ | 91906 | 1752 | 5213 | 6965 | 84941 |
| 13 | ಮೈಸೂರು | 24108 | 97 | 2458 | 2555 | 21553 |
| 14 | ಚಿಕ್ಕಮಗಳೂರು | 88337 | 197 | 3568 | 3765 | 84572 |
| 15 | ಕೊಡಗು | 14446 | 122 | 2368 | 2490 | 11956 |
| 16 | ಬೆಳಗಾವಿ | 10690 | 0 | 8840 | 8840 | 1850 |
| 17 | ಬಾಗಲಕೋಟೆ | 1217 | 0 | 938 | 938 | 279 |
| 18 | ವಿಜಯಪುರ | 1683 | 0 | 1058 | 1058 | 625 |
| 19 | ಚಿತ್ರದುರ್ಗ | 49512 | 0 | 6782 | 6782 | 42730 |
| 20 | ದಾವಣಗೆರೆ | 24201 | 288 | 6522 | 6810 | 17391 |
| 21 | ತುಮಕೂರು | 96139 | 265 | 7617 | 7882 | 88257 |
| 22 | ಗದಗ | 374 | 0 | 333 | 333 | 41 |
| 23 | ಧಾರವಾಡ | 734 | 0 | 545 | 545 | 189 |
| 24 | ಹಾವೇರಿ | 3049 | 38 | 1813 | 1851 | 1198 |
| 25 | ರಾಯಚೂರು | 3253 | 0 | 0 | 0 | 3253 |
| 26 | ಕೊಪ್ಪಳ | 7756 | 0 | 5184 | 5184 | 2572 |
| 27 | ಬೀದರ್ | 1994 | 0 | 541 | 541 | 1453 |
| 28 | ಕಲಬುರಗಿ | 7389 | 11 | 1436 | 1447 | 5942 |
| 29 | ಯಾದಗಿರಿ | 5453 | 0 | 3275 | 3275 | 2178 |
| 30 | ಬಳ್ಳಾರಿ | 16517 | 63 | 4474 | 4537 | 11980 |
| | ಒಟ್ಟು | 836429 | 3092 | 117632 | 120724 | 715705 |

# ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಕಲಂ 94-ಬಿ ರಡಿಯಲ್ಲಿ ನಮೂನೆ 53 ಅರ್ಜಿಗಳ ಪ್ರಗತಿ ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಸ್ವೀಕರಿಸಿದ ಅರ್ಜಿಗಳು ಸಂಖ್ಯೆ | ಸಕ್ರಮ ಅರ್ಜಿಗಳ ಸಂಖ್ಯೆ | ತಿರಸ್ಕೃತ ಅರ್ಜಿಗಳ ಸಂಖ್ಯೆ | ಒಟ್ಟು ವಿಲೇವಾರಿಯಾದ ಅರ್ಜಿಗಳ ಸಂಖ್ಯೆ | ಬಾಕಿ ಅರ್ಜಿಗಳ ಸಂಖ್ಯೆ |
|---|---|---|---|---|---|---|
| 1 | ಬೆಂಗಳೂರು ನಗರ | 19773 | 1681 | 18092 | 19773 | 0 |
| 2 | ಬೆಂಗಳೂರು ಗ್ರಾಮಾಂತರ | 38582 | 9676 | 28476 | 38152 | 430 |
| 3 | ಕೋಲಾರ | 30484 | 8436 | 16176 | 24612 | 5872 |
| 4 | ಚಿಕ್ಕಬಳ್ಳಾಪುರ | 40390 | 8929 | 22808 | 31737 | 8653 |
| 5 | ರಾಮನಗರ | 33669 | 7569 | 19364 | 26933 | 6736 |
| 6 | ಶಿವಮೊಗ್ಗ | 146601 | 18768 | 126982 | 145750 | 851 |
| 7 | ಚಾಮರಾಜನಗರ | 13706 | 2349 | 10140 | 12489 | 1217 |
| 8 | ಉಡುಪಿ | 58382 | 13274 | 35066 | 48340 | 10042 |
| 9 | ಹಾಸನ | 85468 | 21250 | 40789 | 62039 | 23429 |
| 10 | ಉತ್ತರ ಕನ್ನಡ | 26258 | 800 | 25458 | 26258 | 0 |
| 11 | ಮಂಡ್ಯ | 66049 | 4723 | 39338 | 44061 | 21988 |
| 12 | ದಕ್ಷಿಣ ಕನ್ನಡ | 111420 | 32992 | 73659 | 106651 | 4769 |
| 13 | ಮೈಸೂರು | 56025 | 4716 | 48714 | 53430 | 2595 |
| 14 | ಚಿಕ್ಕಮಗಳೂರು | 77178 | 14794 | 55807 | 70601 | 6577 |
| 15 | ಕೊಡಗು | 14321 | 3305 | 8963 | 12268 | 2053 |
| 16 | ಬೆಳಗಾವಿ | 8894 | 522 | 8245 | 8767 | 127 |
| 17 | ಬಾಗಲಕೋಟೆ | 3729 | 117 | 3612 | 3729 | 0 |
| 18 | ವಿಜಯಪುರ | 2908 | 248 | 2655 | 2903 | 5 |
| 19 | ಚಿತ್ರದುರ್ಗ | 60742 | 9628 | 45049 | 54677 | 6065 |
| 20 | ದಾವಣಗೆರೆ | 36324 | 8259 | 27594 | 35853 | 471 |
| 21 | ತುಮಕೂರು | 88711 | 21170 | 60115 | 81285 | 7426 |
| 22 | ಗದಗ | 1865 | 32 | 1829 | 1861 | 4 |
| 23 | ಧಾರವಾಡ | 2702 | 201 | 2501 | 2702 | 0 |
| 24 | ಹಾವೇರಿ | 10902 | 607 | 10265 | 10872 | 30 |
| 25 | ರಾಯಚೂರು | 2254 | 1065 | 1189 | 2254 | 0 |
| 26 | ಕೊಪ್ಪಳ | 7485 | 2070 | 5415 | 7485 | 0 |
| 27 | ಬೀದರ್ | 4550 | 303 | 3029 | 3332 | 1218 |
| 28 | ಕಲಬುರಗಿ | 9776 | 2326 | 5582 | 7908 | 1868 |
| 29 | ಯಾದಗಿರಿ | 3325 | 1272 | 2033 | 3305 | 20 |
| 30 | ಬಳ್ಳಾರಿ | 10315 | 2643 | 7573 | 10216 | 99 |
| ಒಟ್ಟು | | 1072788 | 203725 | 756518 | 960243 | 112545 |



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 295

ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ)

ಉತ್ತರಿಸಬೇಕಾದ ದಿನಾಂಕ : 12-09-2022.

ಉತ್ತರಿಸುವ ಸಚಿವರು : ಮಾನ್ಯ ಮುಜರಾಯಿ ಹಾಗೂ ಹಜ್ ಮತ್ತು ವಕ್ಫ್ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಹಜ್ ಯಾತ್ರೆಗೆ ಹೋಗುವ ಫಲಾನುಭವಿಗಳಿಗೆ ನಿಗದಿಪಡಿಸಿರುವ ಅರ್ಹತಾ ನಿಯಮಗಳು ಯಾವುವು; ನಿಯಮಗಳಲ್ಲಿ ಹೊಸತಾದ ನೀತಿಗಳನ್ನು ಅಳವಡಿಸಲಾಗಿದೆಯೇ; | ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಪ್ರತಿ ವರ್ಷ ಯಾತ್ರಾರ್ಥಿಗಳು ತಮ್ಮ ಸ್ವಂತ ಖರ್ಚಿನಿಂದ ಹಜ್ ಯಾತ್ರೆಗೆ ಪ್ರಯಾಣ ಮಾಡುತ್ತಾರೆ. ಇವರಿಗೆ ತಮ್ಮ ಯಾತ್ರೆಯ ಸಮಯದಲ್ಲಿ ರಾಜ್ಯ ಹಜ್ ಸಮಿತಿಯ ವತಿಯಿಂದ ಸೌಕರ್ಯ / ಸೌಲಭ್ಯವನ್ನು ಕಲ್ಪಿಸಲಾಗುತ್ತದೆ. ಕರ್ನಾಟಕ ರಾಜ್ಯ ಹಜ್ ಸಮಿತಿ / ರಾಜ್ಯ ಮತ್ತು ಕೇಂದ್ರ ಸರ್ಕಾರದ ವತಿಯಿಂದ ಆರ್ಥಿಕವಾಗಿ ಯಾವುದೇ ರೀತಿಯ ಅನುದಾನ / ಸಹಾಯಧನ ನೀಡಲಾಗುವುದಿಲ್ಲ. ಆದುದರಿಂದ ಹಜ್‌ಗಾಗಿ ಆಯ್ಕೆಯಾದ ಅರ್ಜಿದಾರರು ಫಲಾನುಭವಿಗಳಾಗಿರುವುದಿಲ್ಲ.<br>ಹಜ್ ಯಾತ್ರೆಗೆ ಹೋಗುವ ಯಾತ್ರಾರ್ಥಿಗಳಿಗೆ ನಿಗದಿಪಡಿಸಿರುವ ಕೆಲವು ಅರ್ಹತಾ ನಿಯಮಗಳು ಈ ಕೆಳಕಂಡಂತಿವೆ:<br>1. ಕರ್ನಾಟಕ ರಾಜ್ಯದ ನಿವಾಸಿಯಾಗಿರಬೇಕು<br>2. ಅಧಿಕೃತ ದಾಖಲೆಗಳಾದ ಪಾಸ್‌ಪೋರ್ಟ್‌ನ್ನು ಹೊಂದಿರಬೇಕು.<br>3. ಪಾಸ್ ಪೋರ್ಟ್ ಹಜ್ ಆಗುವ ದಿನಾಂಕದಿಂದ 5 ತಿಂಗಳವರೆಗೆ ಮಾನ್ಯವಾಗಿರಬೇಕು<br>4. ತೀವ್ರತರವಾದ ಕಾಯಿಲೆ/ರೋಗಗಳಿಗೆ ತುತ್ತಾಗಿರಬಾರದು<br>5. ಗರ್ಭಿಣಿಯಾದವರು ಹಾಗೂ ಶಿಶುಗಳು ಅರ್ಹರಿರುವುದಿಲ್ಲ<br>6. ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದು, ಮಾನ್ಯ ನ್ಯಾಯಾಲಯದಿಂದ ಅನುಮತಿ ಪಡೆಯದೆ ಇರುವವರು ಅರ್ಹರಿರುವುದಿಲ್ಲ<br>7. ಮಾನ್ಯ ನ್ಯಾಯಾಲಯವು ಅಂತರಾಷ್ಟ್ರೀಯ ಪ್ರಯಾಣವನ್ನು ನಿರ್ಭಂದಿಸಿರುವ ವ್ಯಕ್ತಿಗಳು ಅರ್ಹರಿರುವುದಿಲ್ಲ<br>2022ನೇ ಹಜ್ ಯಾತ್ರೆಗಾಗಿ ಹೊಸತಾದ ನಿಯಮಗಳು ಈ ಕೆಳಕಂಡಂತಿವೆ:<br>1. ಯಾತ್ರಿಕರ ವಯಸ್ಸು 65ನ್ನು ದಾಟಿರಬಾರದು<br>2. ಪ್ರಸಕ್ತ ಸಾಲಿನಲ್ಲಿ ಕೋವಿಡ್ ಲಸಿಕೆಯ ಎರಡು ಡೋಸ್‌ಗಳನ್ನು ಪಡೆಯದೆ ಇರುವವರು ಅರ್ಹರಿರುವುದಿಲ್ಲ. |

| | | |
|---|---|---|
| | | 3. ಗರ್ಭಿಣಿಯಾದವರು ಹಾಗೂ ಶಿಶುಗಳು ಅರ್ಹರಿರುವುದಿಲ್ಲ.<br>4. ಸೌದಿ ಅರೇಬಿಯಾ ದೇಶದ ನಿರ್ದೇಶನದಂತೆ ಪ್ರತಿ ಯಾತ್ರಿಕರು ತಮ್ಮ ಯಾತ್ರೆಯ ಮುನ್ನ 72 ಗಂಟೆಯೊಳಗೆ RTPCR ಪರೀಕ್ಷೆಗೆ ಒಳಪಟ್ಟು ನೆಗಟಿವ್ ಪ್ರಮಾಣಪತ್ರವನ್ನು ಪಡೆದಿರಬೇಕಾಗಿರುತ್ತದೆ. ಮುಂಬೈನ ಭಾರತೀಯ ಹಜ್ ಸಮಿತಿಯು ಈ ವ್ಯವಸ್ಥೆಯನ್ನು ರಾಜ್ಯದ ಯಾತ್ರಿಕರಿಗಾಗಿ ಹಜ್ ಭವನದಲ್ಲಿ ಆಯೋಜಿಸಿರುತ್ತದೆ.<br>5. ಹಜ್-2022ಕ್ಕೆ ರಾಜ್ಯದ ಯಾತ್ರಿಕರು ಕೇವಲ ಬೆಂಗಳೂರು ಎಂಬಾರ್ಕೇಷನ್‌ನಿಂದ ಮಾತ್ರ ಪ್ರಯಾಣ ಮಾಡಿರುತ್ತಾರೆ. ಈ ಹಿಂದೆ ರಾಜ್ಯದ ಯಾತ್ರಿಕರು ಬೆಂಗಳೂರು, ಮಂಗಳೂರು, ಹೈದರಾಬಾದ್, ಗೋವಾ ಮತ್ತು ಮುಂಬೈ ಎಂಬಾರ್ಕೇಷನ್‌ಗಳಿಂದ ಪ್ರಯಾಣ ಮಾಡಿದ್ದರು. |
| ಆ. | ಆಯ್ಕೆಯಾಗುವ ಯಾತ್ರಿಕರಿಗೆ ಒದಗಿಸಿಕೊಡುವ ಸೌಲಭ್ಯ/ಸೌಕರ್ಯಗಳು ಯಾವುವು; (ವಿವರ ನೀಡುವುದು) | ಕರ್ನಾಟಕ ರಾಜ್ಯ ಹಜ್ ಸಮಿತಿಯ ವತಿಯಿಂದ ಆಯ್ಕೆಯಾಗುವ ಯಾತ್ರಿಕರಿಗೆ ಈ ಕೆಳಕಂಡ ಸೌಲಭ್ಯ / ಸೌಕರ್ಯಗಳನ್ನು ಒದಗಿಸಲಾಗುತ್ತದೆ:<br>1. ಹಜ್ ಯಾತ್ರೆಗಾಗಿ ಅರ್ಜಿದಾರರು ಆನ್‌ಲೈನ್ ಮೂಲಕ ಮುಂಬೈನ ಭಾರತೀಯ ಹಜ್ ಸಮಿತಿಯವರು ನೀಡಿರುವ ಕೆಲ ಮಾನದಂಡಗಳನ್ನು ಅನುಸರಿಸಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಬೇಕಾಗಿರುತ್ತದೆ. ಸ್ವೀಕೃತವಾದ ಅರ್ಜಿಗಳನ್ನು ಪರಿಶೀಲನೆ ಮಾಡುವುದು, ದಾಖಲೆಗಳನ್ನು ಸ್ಕ್ಯಾನ್ ಮಾಡುವುದು, ಮುಂಬೈನ ಭಾರತೀಯ ಹಜ್ ಸಮಿತಿಯ ಸರ್ವರ್‌ನಲ್ಲಿ ಅಪ್‌ಲೋಡ್ ಮಾಡುವುದು<br>2. ಮುಂಬೈನ ಭಾರತೀಯ ಹಜ್ ಸಮಿತಿಯ ವತಿಯಿಂದ ಕಲ್ಪಿಸಿರುವ ಕೇಂದ್ರೀಕೃತ ವೆಬ್ ಸರ್ವರ್‌ನಿಂದ ಗಣಕೀಕೃತ ಲಾಟರಿ (ಖುರ್ರಾ) ಮುಖಾಂತರ ಜಿಲ್ಲಾವಾರು ನಿಗದಿಪಡಿಸಿರುವ ಖೋಟಾದನ್ವಯ ಹಜ್ ಯಾತ್ರಿಕರ ಆಯ್ಕೆ ಪ್ರಕ್ರಿಯೆ ಆಯೋಜಿಸುವುದು.<br>3. ಆಯ್ಕೆಯಾದ ಹಜ್ ಯಾತ್ರಿಕರಿಂದ ಅಂತರರಾಷ್ಟ್ರೀಯ ಪಾಸ್‌ಪೋರ್ಟ್‌ಗಳನ್ನು, ವೈದ್ಯಕೀಯ ಪ್ರಮಾಣ ಪತ್ರ ಮತ್ತು ಇನ್ನಿತರೆ ಅಗತ್ಯ ದಾಖಲೆಗಳನ್ನು ಸಂಗ್ರಹ ಮಾಡಿ, ಮುಂಬೈನ ಭಾರತೀಯ ಹಜ್ ಸಮಿತಿಯ ಕಚೇರಿಗೆ ವರ್ಗಾಯಿಸುವುದು.<br>4. ಆಯ್ಕೆಯಾದ ಯಾತ್ರಿಕರಿಗೆ ಹಾಗೂ ಖಾಸಗಿಯಾಗಿ ಹಜ್ ಯಾತ್ರೆಗೆ ಪ್ರಯಾಣಿಸುವ ಯಾತ್ರಿಕರು ಸೇರಿದಂತೆ ಮೆನಂಜೈಟಿಸ್ ಲಸಿಕೆ ಚುಚ್ಚುಮದ್ದು ಕಾರ್ಯಕ್ರಮವನ್ನು ವಿವಿಧ ಜಿಲ್ಲಾ ಕೇಂದ್ರಗಳಲ್ಲಿ ಆಯೋಜಿಸುವುದು. |

| | | |
|---|---|---|
| | | 5. ಯಾತ್ರಿಕರಿಗೆ ಹಜ್ ಯಾತ್ರೆಯು ಸುಗಮವಾಗಿ ಹಾಗೂ ಸುಖಕರವಾಗಿ ಮಾಡಲು ಸಹಾಯಕವಾಗುವಂತೆ ತರಬೇತಿ (ಓರಿಯಂಟೇಷನ್) ಕಾರ್ಯಕ್ರಮವನ್ನು ರಾಜ್ಯ ಹಜ್ ಸಮಿತಿಯು ಆಯೋಜಿಸುತ್ತಿರುತ್ತದೆ.<br>6. ಸೌದಿ ಅರೇಬಿಯಾದಲ್ಲಿ ಕರ್ನಾಟಕ ರಾಜ್ಯದಿಂದ ಬಂದ ಹಜ್ ಯಾತ್ರಿಕರ ಕಲ್ಯಾಣವನ್ನು ನೋಡಿಕೊಳ್ಳಲು ಹಜ್ ಸ್ವಯಂಸೇವಕರನ್ನು (ಖಾದಿಮುಲ್ ಹುಜ್ಜಾಜ್) ನಿಯೋಜನೆ ಮಾಡುವುದು. ಈ ನಿಯೋಜನೆಗಾಗಿ ತಗಲುವ ವೆಚ್ಚವನ್ನು ಮುಂಬೈನ ಭಾರತೀಯ ಹಜ್ ಸಮಿತಿ ಹಾಗೂ ರಾಜ್ಯ ಹಜ್ ಸಮಿತಿಯು 50:50ರ ಅನುಪಾತದಲ್ಲಿ ಭರಿಸುತ್ತದೆ. ಹಜ್ -2022ನಲ್ಲಿ ಮುಂಬೈನ ಭಾರತೀಯ ಹಜ್ ಸಮಿತಿಯ ನಿರ್ದೇಶನದಂತೆ ಪ್ರತಿ 150 ಯಾತ್ರಿಕರಿಗಾಗಿ ಒಬ್ಬ ಖಾದಿಮುಲ್ ಹುಜ್ಜಾಜ್‌ರನ್ನು ರಾಜ್ಯ ಹಜ್ ಸಮಿತಿಯು ನಿಯೋಜಿಸಿರುತ್ತದೆ.<br>7. ಭಾರತೀಯ ಹಜ್ ಸಮಿತಿಯಿಂದ ಸ್ವೀಕೃತವಾಗುವ ಕನ್ನಡ, ಇಂಗ್ಲೀಷ್ ಮತ್ತು ಉರ್ದು ಭಾಷೆಗಳಲ್ಲಿ ಹಜ್ ಗೈಡ್ ಪುಸ್ತಕಗಳನ್ನು ಪ್ರತಿ ವರ್ಷ ಆಯ್ಕೆಯಾದ ಹಜ್ ಯಾತ್ರಿಕರಿಗೆ ಉಚಿತವಾಗಿ ಸರಬರಾಜು ಮಾಡುವುದು.<br>8. ಯಾವುದೇ ಹಜ್ ಸಂಬಂಧಿತ ಮಾಹಿತಿಯನ್ನು ಯಾತ್ರಾರ್ಥಿಗಳಿಗೆ ತಲುಪಿಸುವುದು<br>9. ಹಜ್ ಯಾತ್ರಿಗಳ ಸುಗಮ, ಸುಖಕರ ಪ್ರಯಾಣಕ್ಕಾಗಿ ಹಾಗೂ ಸೌದಿ ಅರೇಬಿಯಾಕ್ಕೆ ಹಜ್ ಯಾತ್ರಾರ್ಥಿಗಳ ಪ್ರಯಾಣ ಅರಂಭವಾಗುವ ಮುನ್ನ ರಾಜ್ಯ ಹಜ್ ಸಮಿತಿಯು ಹಜ್ ಕ್ಯಾಂಪನ್ನು ಆಯೋಜಿಸುತ್ತಿದ್ದು, ಈ ಹಜ್ ಕ್ಯಾಂಪ್‌ನಲ್ಲಿ ತಮ್ಮ ಪ್ರಯಾಣಕ್ಕೆ ಮುನ್ನ ಹಜ್ ಯಾತ್ರಿಗಳು ಉಳಿದುಕೊಳ್ಳಲು ಎಲ್ಲಾ ವ್ಯವಸ್ಥೆಯನ್ನು (ಬೋರ್ಡಿಂಗ್ ಮತ್ತು ಲಾಡ್ಜಿಂಗ್) ರಾಜ್ಯ ಹಜ್ ಸಮಿತಿಯು ಮಾಡಿದ್ದು, ಕಾಗದ ಪತ್ರಗಳ ಹಂಚಿಕೆ, ವಿದೇಶಿ ವಿನಿಮಯ ಹಂಚಿಕೆಯ ವ್ಯವಸ್ಥೆ, ಯಾತ್ರಾರ್ಥಿಗಳನ್ನು ವಿಮಾನ ನಿಲ್ದಾಣಕ್ಕೆ ತಲುಪಿಸುವ ಸಾರಿಗೆ ವ್ಯವಸ್ಥೆ ಹಾಗೂ ಇನ್ನಿತರೇ ವ್ಯವಸ್ಥೆಗಳನ್ನು ಹಜ್ ಕ್ಯಾಂಪ್‌ಗಳಲ್ಲಿಯೇ ಸಂಬಂಧಪಟ್ಟ ಇಲಾಖೆಗಳ ಸಹಕಾರದಿಂದ ಒದಗಿಸಲಾಗುತ್ತದೆ.<br>10. ಹಜ್ ವಿಮಾನ ಕಾರ್ಯಾಚರಣೆ ಇತ್ಯಾದಿಗಳ ಯಶಸ್ವಿ ವ್ಯವಸ್ಥೆಗಾಗಿ, ಭಾರತ ಸರ್ಕಾರ, ರಾಜ್ಯ ಸರ್ಕಾರ, ಮುಂಬೈನ ಭಾರತೀಯ ಹಜ್ ಸಮಿತಿ ಮತ್ತು ಇನ್ನಿತರೇ ಸಂಸ್ಥೆಗಳಾದ ಸೌದಿ ಅರೇಬಿಯನ್ ಏರ್‌ಲೈನ್ಸ್/ ಏರ್ ಇಂಡಿಯಾ, ಏರ್‌ಪೋರ್ಟ್ ಅಥಾರಿಟಿ ಆಫ್ ಇಂಡಿಯಾ, |

<table>
<tr>
<td></td>
<td></td>
<td>ಇಮಿಗ್ರೇಷನ್, ಕಸ್ಟಮ್ಸ್, ಪೊಲೀಸ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಇತರೆ ಸ್ವಯಂಸೇವಾ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು.<br>11. ಹಜ್ ವಿಮಾನಗಳಲ್ಲಿ ಪ್ರಯಾಣಿಸುವ ಯಾತ್ರಿಕರ ನಿರ್ಗಮನ ಹಾಗೂ ಆಗಮನದ ಸಮಯಗಳಲ್ಲಿ ವಸತಿ, ಸಾರಿಗೆ ಇತ್ಯಾದಿಗಳಿಗೆ ಸಹಾಯಕ ವ್ಯವಸ್ಥೆಗಳನ್ನು ಮಾಡುವುದು.</td>
</tr>
<tr>
<td>ಇ</td>
<td>ಕಳೆದ 3 ವರ್ಷಗಳಲ್ಲಿ ಎಷ್ಟು ಜನ ಯಾತ್ರಾ ಅಪೇಕ್ಷಿತರುಗಳು ಅರ್ಜಿ ಸಲ್ಲಿಸಿದ್ದರು; ಎಷ್ಟು ಜನರಿಗೆ ಪವಿತ್ರ ಯಾತ್ರೆಯ ಸೌಲಭ್ಯವನ್ನು ಒದಗಿಸಿಕೊಡಲಾಗಿರುತ್ತದೆ; (ವಿವರ ನೀಡುವುದು)</td>
<td>ಕಳೆದ 3 ವರ್ಷಗಳಿಂದ ಹಜ್ ಯಾತ್ರೆಗಾಗಿ ಅರ್ಜಿ ಸಲ್ಲಿಸಿದ ಹಾಗೂ ಪ್ರಯಾಣ ಮಾಡಿರುವ ಯಾತ್ರಾರ್ಥಿಗಳ ಸಂಖ್ಯೆ ಈ ಕೆಳಕಂಡಂತಿದೆ.
<table>
<tr><th>ವರ್ಷ</th><th>ಯಾತ್ರೆಗಾಗಿ ಅರ್ಜಿ ಸಲ್ಲಿಸಿದ ಆಪೇಕ್ಷಿತರ ಸಂಖ್ಯೆ</th><th>ಯಾತ್ರೆಗಾಗಿ ಪ್ರಯಾಣ ಮಾಡಿದವರ ಸಂಖ್ಯೆ</th></tr>
<tr><td>2020</td><td>9823</td><td rowspan="2">ಕೋವಿಡ್-19 ಮಹಾಮಾರಿಯಿಂದಾಗಿ ಹಜ್ 2020 ಹಾಗೂ ಹಜ್ 2021ರಲ್ಲಿ ಅಂತರಾಷ್ಟ್ರೀಯ ಯಾತ್ರಾರ್ಥಿಗಳಿಗೆ ಹಜ್ ಯಾತ್ರೆಯನ್ನು ಸೌದಿ ಅರೇಬಿಯಾ ಸರ್ಕಾರವು ರದ್ದುಗೊಳಿಸಿರುತ್ತದೆ.</td></tr>
<tr><td>2021</td><td>2223</td></tr>
<tr><td>2022</td><td>3122</td><td>3085</td></tr>
</table>
</td>
</tr>
<tr>
<td>ಈ</td>
<td>ಹಜ್ ಪವಿತ್ರ ಯಾತ್ರೆಯ ಅವಕಾಶವನ್ನು ಕೋರುವವರ ಬೇಡಿಕೆಯನ್ನು ಇನ್ನಷ್ಟು ಅಧಿಕ ಪ್ರಮಾಣದಲ್ಲಿ ಈಡೇರಿಸುವ ಕುರಿತು ಸರ್ಕಾರದ ಕ್ರಮಗಳು ಯಾವುವು ?</td>
<td>2011ರ ಜನಗಣತಿಯನ್ವಯ ಪ್ರತಿ ವರ್ಷ ರಾಜ್ಯದಲ್ಲಿರುವ ಮುಸ್ಲಿಂ ಸಮುದಾಯದ ಜನಸಂಖ್ಯೆಯ ಅಧಾರದ ಮೇಲೆ, ಕೇಂದ್ರ ಸರ್ಕಾರದ ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯದ ಅನುಮೋದನೆ ಪಡೆದು ಮುಂಬೈನ ಭಾರತೀಯ ಹಜ್ ಸಮಿತಿಯು ರಾಜ್ಯದಿಂದ, ಹೊರಡುವ ಯಾತ್ರಿಕರ ಹಜ್ ಖೋಟಾವನ್ನು ನಿಗದಿಪಡಿಸುತ್ತದೆ. ಕೋಟಾಕ್ಕಿಂತ ಅರ್ಜಿಗಳು ಕಡಿಮೆ ಬಂದಲ್ಲಿ ಎಲ್ಲಾ ಅರ್ಜಿದಾರರು ಯಾತ್ರೆಗೆ ಅರ್ಹರು, ಹೆಚ್ಚಾದಲ್ಲಿ ಮುಂಬೈನ ಭಾರತೀಯ ಹಜ್ ಸಮಿತಿಯ ವತಿಯಿಂದ ಕಲ್ಪಿಸಿರುವ ಕೇಂದ್ರೀಕೃತ ವೆಬ್ ಸರ್ವರ್‌ನಿಂದ ಗಣಕೀಕೃತ ಲಾಟರಿ (ಖುರ್ರಾ) ಮುಖಾಂತರ ಜಿಲ್ಲಾವಾರು ಆಯ್ಕೆ ಪ್ರಕ್ರಿಯೆ ನಡೆಯುತ್ತದೆ.</td>
</tr>
</table>

ಸಂಖ್ಯೆ: MWD 203 LMQ 2022

(ಶಶಿಕಲಾ ಅ.ಜೊಲ್ಲೆ)
ಮುಜರಾಯಿ ಹಜ್ ಮತ್ತು
ವಕ್ಫ್ ಸಚಿವರು

| | |
|---|---|
| (ಇ) ಕಳೆದ ಸಾಲಿನಲ್ಲಿ ಹಾನಿಗೊಳಗಾದ ಮನೆಗಳಿಗೆ ಆಧಾರ್ ಮತ್ತು ಪಡಿತರ ಚೀಟಿಯಲ್ಲಿ ಹೆಸರು ಹೊಂದಾಣಿಕೆಯಾಗದ ಕಾರಣ ಮತ್ತು ಬ್ಯಾಂಕ್ ಖಾತೆಗಳಿಗೆ ಆಧಾರ್ ಲಿಂಕ್ ಅಥವಾ ಇನ್ನಿತರೆ ಸಮಸ್ಯೆಗಳಿಂದಾಗಿ ಎಷ್ಟು ಜನ ಅರ್ಜಿದಾರರಿಗೆ ಪರಿಹಾರ ದೊರಕಿರುವುದಿಲ್ಲ. | 2021-22ನೇ ಸಾಲಿನ ಮಳೆಯಿಂದ ಹಾನಿಯಾದ ವಾಸದ ಮನೆಗಳ ಪೈಕಿ ಕಡೂರು ವಿಧಾನಸಭಾ ಕ್ಷೇತ್ರದ 31 ಪ್ರಕರಣಗಳಲ್ಲಿ ಪಡಿತರ ಚೀಟಿ ಸಮಸ್ಯೆಯಿಂದ ಸಂತ್ರಸ್ಥರ ವಿವರವನ್ನು ತಂತ್ರಾಂಶದಲ್ಲಿ ನಮೂದಿಸಲು ಅವಕಾಶವಾಗದ ಕಾರಣ ಸದರಿ ಸಂತ್ರಸ್ಥರಿಗೆ ಪರಿಹಾರ ದೊರೆತಿರುವುದಿಲ್ಲ. |
| (ಈ) ಹಾಗಿದ್ದಲ್ಲಿ, ಇಂತಹ ಸಮಸ್ಯೆಗಳಿಗೆ ಬಗೆಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: ಈ ಸಮಸ್ಯೆಗಳನ್ನು ಬಗೆಹರಿಸಿ ಅರ್ಜಿದಾರರಿಗೆ ನಿಗದಿತ ಅವಧಿಯೊಳಗೆ ಪರಿಹಾರ ಧನ ನೀಡಲು ಸರ್ಕಾರ ಕ್ರಮ ಕೈಗೊಳ್ಳುವುದೇ: ಹಾಗಿದ್ದಲ್ಲಿ, ಯಾವ ಅವಧಿಯೊಳಗೆ ಪರಿಹಾರ ಧನ ನೀಡಲಾಗುವುದು. (ಮಾಹಿತಿ ನೀಡುವುದು). | ಪಡಿತರ ಚೀಟಿ ಸಮಸ್ಯೆ ಇರುವ ಪ್ರಕರಣಗಳನ್ನು ವಿಶೇಷ ಪ್ರಕರಣಗಳೆಂದು ಪರಿಗಣಿಸಿ ಪರಿಹಾರ ನೀಡಿ ತಂತ್ರಾಂಶದಲ್ಲಿ ನಮೂದಿಸಲು, ಜಿಲ್ಲಾಧಿಕಾರಿಗಳ ಕೋರಿಕೆಯನ್ವಯ ಅವಕಾಶ ಕಲ್ಪಿಸಿಕೊ**ಡ**ಲಾಗುತ್ತಿದೆ. |
| (ಉ) ಅರ್ಜಿದಾರರಿಗೆ ಪರಿಹಾರ ನೀಡುವಲ್ಲಿ ವಿಳಂಬವಾಗುತ್ತಿರುವುದರಿಂದ ಹಾನಿಗೊಳಗಾದವರಿಗೆ ಕೂಡಲೇ ಪರಿಹಾರ ನೀಡಲು ಸರ್ಕಾರ ಕ್ರಮ ಕೈಗೊಳ್ಳುವುದೇ: ಹಾಗಿದ್ದಲ್ಲಿ, ಯಾವ ರೀತಿ ಕ್ರಮಕೈಗೊಳ್ಳಲಾಗುವುದು? (ಮಾಹಿತಿ ನೀಡುವುದು) | 2021-22ನೇ ಸಾಲಿನ ಅತಿವೃಷ್ಟಿಯಿಂದ ಹಾನಿಯಾದ ನಿಗಧಿತ ಅವಧಿಯೊಳಗೆ ತಹಶೀಲ್ದಾರ್ ಮತ್ತು ತಂಡದಿಂದ ಪರಿಶೀಲಿಸಿದ ಅರ್ಹವಿರುವ ಎಲ್ಲಾ ಸಂತ್ರಸ್ಥರ ವಿವರವನ್ನು ತಂತ್ರಾಂಶದಲ್ಲಿ ದಾಖಲಿಸಿ ಸರ್ಕಾರದ ಸೂಚನೆಯಂತೆ A & B ವರ್ಗದ ಮನೆಗಳಿಗೆ ಪ್ರಾರಂಭಿಕ ಹಂತದ ಅನುದಾನ ರೂ.95,100/-ಗಳನ್ನು C ವರ್ಗದ ಮನೆಗಳಿಗೆ ರೂ.50,000/-ಗಳ ಪರಿಹಾರವನ್ನು ತಹಶೀಲ್ದಾರ್ ರವರಿಂದ ಸಂತ್ರಸ್ಥರಿಗೆ ಈಗಾಗಲೇ ಬಿಡುಗಡೆ ಮಾಡಲಾಗಿರುತ್ತದೆ. ಸಂತ್ರಸ್ಥರ ಮನೆಯ ಪುನರ್ ನಿರ್ಮಾಣದ ಪ್ರಗತಿಯನುಸಾರ RGRHCL ನಿಂದ ಅನುದಾನ ಬಿಡುಗಡೆಯಾಗಿರುತ್ತದೆ. |

ಕಂಇ *347* ಟಿಎನ್‌ಆರ್ *2022*

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಬೆಳ್ಳಿಪ್ರಕಾಶ್ (ಕಡೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **329** |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಯಲ್ಲಿ ಎಷ್ಟು ಗ್ರಾಮಗಳಲ್ಲಿ ಸರ್ಕಾರಿ ಮತ್ತು ಖಾಸಗಿ ಜಮೀನುಗಳನ್ನು ಆಶ್ರಯ ಯೋಜನೆಗಾಗಿ ಕಾಯ್ದಿರಿಸಲಾಗಿದೆ; ಎಷ್ಟು ಗ್ರಾಮಗಳಲ್ಲಿ ಎಷ್ಟು ವಿಸ್ತೀರ್ಣದ ಸರ್ಕಾರಿ ಜಮೀನನ್ನು ಮಂಜೂರು ಮಾಡಿ ಪಹಣಿಯನ್ನು ತಿದ್ದುಪಡಿ ಮಾಡಲಾಗಿದೆ; ಎಷ್ಟು ಖಾಸಗಿ ಜಮೀನುಗಳನ್ನು ಖರೀದಿಸಿ ಆಶ್ರಯ ಯೋಜನೆಗಾಗಿ ಕಾಯ್ದಿರಿಸಲಾಗಿದೆ; (ವಿಧಾನ ಸಭಾ ಕ್ಷೇತ್ರವಾರು ಪೂರ್ಣ ಮಾಹಿತಿಯನ್ನು ನೀಡುವುದು) | ಚಿಕ್ಕಮಗಳೂರು ಜಿಲ್ಲೆಯ ಗ್ರಾಮೀಣ ಪ್ರದೇಶಗಳ ಅರ್ಹ ಕುಟುಂಬಗಳಿಗೆ ನಿವೇಶನ ಹಂಚಿಕೆ ಮಾಡಲು ಒಟ್ಟು 75 ಗ್ರಾಮಗಳಲ್ಲಿ ವಿವಿಧ ಸರ್ವೆ ನಂಬರಗಳಲ್ಲಿ ಒಟ್ಟು 270.07 ಎಕರೆ ಸರ್ಕಾರಿ ಹಾಗೂ ಖರೀದಿಸಿರುವ 3.04 ಎಕರೆ ಜಮೀನು ಮತ್ತು ನಗರ ಪ್ರದೇಶಗಳಲ್ಲಿ ಒಟ್ಟು 55.02 ಎಕರೆ ಸರ್ಕಾರಿ ಜಮೀನನ್ನು ನಿವೇಶನ ಯೋಜನೆಗಳಡಿ ಕಾಯ್ದಿರಿಸಲಾಗಿದೆ.<br><br>ಸದರಿ ವಿಧಾನ ಸಭಾ ಕ್ಷೇತ್ರ/ಸರ್ವೆ ನಂಬರ್‌ವಾರು ವಿವರ ಅನುಬಂಧ – 1 ರಲ್ಲಿ ಒದಗಿಸಲಾಗಿದೆ.<br><br>ಸರ್ಕಾರಿ ಜಮೀನಿನಲ್ಲಿ ಆಶ್ರಯ ನಿವೇಶನಕ್ಕೆ ಭೂಮಿ ಕಾಯ್ದಿರಿಕೆಯಂತೆ ಪಹಣಿಗಳನ್ನು ದಾಖಲು ಮಾಡಿರುವುದಾಗಿ ದಿನಾಂಕ:08.09.2022 ರಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. |
| ಆ) | ಕಡೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಆಶ್ರಯ ಯೋಜನೆಯಡಿ ಸರ್ಕಾರಿ ಹಾಗೂ ಖಾಸಗಿ ಜಮೀನುಗಳನ್ನು ಕಾಯ್ದಿರಿಸುವ ಕುರಿತು ಒಟ್ಟು ಎಷ್ಟು ಪ್ರಸ್ತಾವನೆಗಳಿವೆ; ಅವುಗಳು ಯಾವು ಹಂತದಲ್ಲಿವೆ; ಅವುಗಳನ್ನು ಯಾವ ಕಾಲಮಿತಿಯೊಳಗೆ ಕಾಯ್ದಿರಿಸಲಾಗುವುದು; ಕಾಯ್ದಿರಿಸುವ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಮಾಹಿತಿ ನೀಡುವುದು) | ಕಡೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಆಶ್ರಯ ಯೋಜನೆಯಡಿ ನಿವೇಶನ ಹಂಚಿಕೆ ಮಾಡಲು ಗ್ರಾಮೀಣ ಪ್ರದೇಶದಲ್ಲಿ 14.27 ಎಕರೆ ಸರ್ಕಾರಿ ಹಾಗೂ ನಗರ ಪ್ರದೇಶದ ಬೀರೂರು ಪುರಸಭೆ ವ್ಯಾಪ್ತಿಯಲ್ಲಿ 15.00 ಎಕರೆ ಜಮೀನನ್ನು ಕಾಯ್ದಿರಿಸಲಾಗಿದೆ.<br><br>ಕಡೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾಯ್ದಿರಿಸಲಾದ ಜಮೀನಿನ ವಿವರ ಅನುಬಂಧ – 2 ರಲ್ಲಿ ಒದಗಿಸಲಾಗಿದೆ.<br><br>ಕಡೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಆಶ್ರಯ ಯೋಜನೆಯಡಿ ಸರ್ಕಾರಿ ಹಾಗೂ ಖಾಸಗಿ ಜಮೀನುಗಳನ್ನು ಕಾಯ್ದಿರಿಸುವ ಕುರಿತು ಗ್ರಾಮೀಣ ಪ್ರದೇಶದಲ್ಲಿ ಒಟ್ಟು 15 ಪ್ರಸ್ತಾವನೆಗಳು ಹಾಗೂ ನಗರ ಪ್ರದೇಶದಲ್ಲಿ 01 ಪ್ರಸ್ತಾವನೆ ಇರುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.<br><br>ಕಡೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಜಮೀನನ್ನು ಕಾಯ್ದಿರಿಸುವ ಪ್ರಸ್ತಾವನೆಗಳ ವಿವರ ಅನುಬಂಧ – 3 ರಲ್ಲಿ ಒದಗಿಸಲಾಗಿದೆ.<br><br>ಸರ್ಕಾರಿ/ಖಾಸಗಿ ಜಮೀನನ್ನು ಗುರುತಿಸಿ ಕೊಡುವಂತೆ ಕಾರ್ಯನಿರ್ವಹಣಾಧಿಕಾರಿಗಳು, ತಾಲ್ಲೂಕು ಪಂಚಾಯಿತಿ, ಕಡೂರು ತಾಲ್ಲೂಕು ಇವರು ತಹಸೀಲ್ದಾರ್, ಕಡೂರು ಇವರನ್ನು ಕೋರಲಾಗಿದೆ. |

ಇ) ಕಳೆದ ಮೂರು ವರ್ಷಗಳಲ್ಲಿ ನಿವೇಶನ ರಹಿತರಿಗೆ ಹಂಚಲಾದ ನಿವೇಶನಗಳು ಎಷ್ಟು; (ಅವುಗಳ ಪೂರ್ಣ ಮಾಹಿತಿ ನೀಡುವುದು)

2019-20, 2020-21, 2021-22 ನೇ ಸಾಲುಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕಡೂರು ವಿಧಾನ ಸಭಾ ಕ್ಷೇತ್ರವನ್ನು ಒಳಗೊಂಡಂತೆ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಒಟ್ಟು 153 ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ. ವಿವರ ಕೆಳಕಂಡಂತಿದೆ.

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಪ್ರದೇಶ | | ಒಟ್ಟು |
|---|---|---|---|---|
| | | ಗ್ರಾಮೀಣ | ನಗರ | |
| 1 | ಕಡೂರು | 15 | - | 15 |
| 2 | ಮೂಡಿಗೆರೆ | 137 | - | 137 |
| 3 | ಶೃಂಗೇರಿ | - | 1 | 1 |
| | **ಒಟ್ಟು** | **152** | **1** | **153** |

ಈ) ನಿವೇಶನಗಳನ್ನು ಕಾಯ್ದಿರಿಸಿದಾಗ್ಯೂ ಸಹ ನಿವೇಶನ ಹಂಚಿಕೆ ಮಾಡದಿರಲು ಕಾರಣಗಳೇನು; ಕಾಯ್ದಿರಿಸಿರುವ ನಿವೇಶನಗಳನ್ನು ವಿತರಣೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು)

ನಿವೇಶನ ಹಂಚಿಕೆ ಮಾಡಲು ಜಮೀನನ್ನು ಕಾಯ್ದಿರಿಸಿದಾಗ್ಯೂ ಸಹ ಕೆಲವು ಕಡೆಗಳಲ್ಲಿ ಈ ಕೆಳಕಂಡ ಕಾರಣಗಳಿಂದ ನಿವೇಶನ ಹಂಚಿಕೆ ವಿಳಂಬವಾಗಿರುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.

- ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಅರ್ಹ ಫಲಾನುಭವಿಗಳ ಆಯ್ಕೆ ಬಾಕಿ ಇರುತ್ತದೆ.
- ನಿವೇಶನ ಹಂಚಿಕೆಗೆ ಕಾಯ್ದಿರಿಸಲಾದ ಕೆಲವು ಜಮೀನುಗಳಿಗೆ ಸಂಬಂಧಪಟ್ಟಂತೆ ಅರಣ್ಯ ಮತ್ತು ಕಂದಾಯ ಇಲಾಖೆಯ ಜಂಟಿ ಸರ್ವೆ ಅಗತ್ಯ ಇರುತ್ತದೆ.
- ನಿವೇಶನ ಹಂಚಿಕೆಗೆ ಕಾಯ್ದಿರಿಸಲಾದ ಕೆಲವು ಜಮೀನುಗಳಿಗೆ ಹದ್ದುಬಸ್ತು ಗುರುತು ಮಾಡಲು ಬಾಕಿ ಇರುತ್ತದೆ.
- ಬೀರೂರು ಪುರಸಭೆ ವ್ಯಾಪ್ತಿಯಲ್ಲಿ ಸರ್ವೆ ನಂ. 4 ರಲ್ಲಿ ಒಟ್ಟು 15.00 ಎಕರೆ ಸರ್ಕಾರಿ ಜಮೀನನ್ನು ನಿವೇಶನ/ವಸತಿ ಹಂಚಿಕೆಗೆ ಕಾಯ್ದಿರಿಸಲಾಗಿದ್ದು, ಸದರಿ ಪ್ರದೇಶದಲ್ಲಿ ತುಮಕೂರು - ಶಿವಮೊಗ್ಗ ರಾಷ್ಟ್ರೀಯ ಹೆದ್ದಾರಿ 206 ಹಾದು ಹೋಗಿರುವುದರಿಂದ 6.10 ಎಕರೆ ಜಮೀನನ್ನು ಹೊರತುಪಡಿಸಿ, ಉಳಿಕೆ ಪ್ರದೇಶಕ್ಕೆ ನಗರ ಯೋಜನಾ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ನಗರ ಆಶ್ರಯ ಸಮಿತಿಯಲ್ಲಿ ವಿಷಯ ಮಂಡಿಸಿ, ಆಶ್ರಯ ಸಮಿತಿಯ ನಿರ್ಣಯದಂತೆ ಹಂಚಿಕೆಗೆ ಕ್ರಮವಹಿಸಲಾಗುವುದೆಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.

ಅರ್ಹ ನಿವೇಶನರಹಿತ ಕುಟುಂಬಗಳಿಗೆ ನಿವೇಶನ ಹಂಚಿಕೆ ಮಾಡಲು ಮುಖ್ಯಮಂತ್ರಿಗಳ ಗ್ರಾಮೀಣ ಮತ್ತು ನಗರ ನಿವೇಶನ ಯೋಜನೆಗಳು ಜಾರಿಯಲ್ಲಿರುತ್ತವೆ. ಈ ಯೋಜನೆಗಳಡಿ ನಿವೇಶನ ಹಂಚಿಕೆ ಮಾಡಲು ಸರ್ಕಾರಿ ಜಮೀನಿಗೆ ಪ್ರಥಮ ಆದ್ಯತೆ ನೀಡಲಾಗಿದ್ದು, ಸ್ಥಳೀಯವಾಗಿ ಲಭ್ಯವಿರುವ ಸರ್ಕಾರಿ ಜಮೀನನ್ನು ಕಂದಾಯ ಇಲಾಖೆ/ ಜಿಲ್ಲಾಧಿಕಾರಿಗಳಿಂದ ಮಂಜೂರು ಮಾಡಿಸಿಕೊಂಡು ನಿವೇಶನ ಹಂಚಿಕೆ ಮಾಡಲಾಗುತ್ತಿದೆ.

ಒಂದು ವೇಳೆ ಸರ್ಕಾರಿ ಜಮೀನು ಲಭ್ಯವಿಲ್ಲದ ಕಡೆಗಳಲ್ಲಿ ಮಾತ್ರ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾ ಜಮೀನು ಖರೀದಿ ಸಮಿತಿ ಮೂಲಕ ಖಾಸಗಿ ಜಮೀನು ಖರೀದಿಗೆ

ಕ್ರಮ ವಹಿಸಲಾಗುತ್ತಿದೆ.

ಸರ್ಕಾರದ ಆದೇಶ ಸಂಖ್ಯೆ :ವಇ 33 ಹೆಚ್‌ಎಹೆಚ್ 2016 (ಭಾ-2), ದಿನಾಂಕ : 12.07.2016 ರಲ್ಲಿ ಜಮೀನು ಖರೀದಿ ದರಗಳನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

| ಕ್ರ. ಸಂ. | ಪ್ರದೇಶ | ನಿಗದಿಪಡಿಸಿರುವ ಗರಿಷ್ಠ ದರ (ರೂ.ಲಕ್ಷಗಳಲ್ಲಿ) |
|---|---|---|
| 1 | ಗ್ರಾಮೀಣ ಪ್ರದೇಶ | 9.00 |
| 2 | ಪಟ್ಟಣ ಪಂಚಾಯಿತಿ | 12.00 |
| 3 | ಪುರಸಭೆ | 15.00 |
| 4 | ನಗರಸಭೆ | 22.50 |
| 5 | ಮಹಾನಗರಪಾಲಿಕೆ | 37.50 |
| 6 | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 75.00 |

ಮೇಲ್ಕಂಡ ವಿಧಾನಗಳ ಮೂಲಕ ನಿವೇಶನರಹಿತರ ಸಂಖ್ಯೆಗನುಗುಣವಾಗಿ ಮಂಜೂರಾದ ಸರ್ಕಾರಿ/ಖರೀದಿಸಲಾದ ಖಾಸಗಿ ಜಮೀನನ್ನು ಬಳಸಿಕೊಂಡು ಅರ್ಹ ಕುಟುಂಬಗಳಿಗೆ ನಿವೇಶನ ಹಂಚಿಕೆ ಮಾಡಲಾಗುತ್ತಿದೆ. ನಿವೇಶನ ಹಂಚಿಕೆಗೆ ಯಾವುದೇ ಗರಿಷ್ಠ ಗುರಿ ಅಥವಾ ಕಾಲಮಿತಿ ನಿಗಧಿಪಡಿಸಿರುವುದಿಲ್ಲ. ಜಮೀನಿನ ಲಭ್ಯತೆಗನುಗುಣವಾಗಿ ಹಂತ ಹಂತವಾಗಿ ನಿವೇಶನ/ವಸತಿ ಸೌಕರ್ಯ ಒದಗಿಸಲು ಕ್ರಮ ವಹಿಸಲಾಗುತ್ತಿದೆ.

ನಿವೇಶನ ಹಂಚಿಕೆಗೆ ಯಾವುದೇ ಗರಿಷ್ಠ ಗುರಿ ಅಥವಾ ಕಾಲಮಿತಿ ನಿಗಧಿಪಡಿಸಿರುವುದಿಲ್ಲ. ಜಮೀನಿನ ಲಭ್ಯತೆಗನುಗುಣವಾಗಿ ಹಂತ ಹಂತವಾಗಿ ನಿವೇಶನ/ವಸತಿ ಸೌಕರ್ಯ ಒದಗಿಸಲು ಕ್ರಮ ವಹಿಸಲಾಗುತ್ತಿದೆ.

ಸಂಖ್ಯೆ :ವಇ 360 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

**LAQ - 329** ಅನುಬಂಧ - 01

ಚಿಕ್ಕಮಗಳೂರು ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ನಿವೇಶನ ಹಂಚಿಕೆಗೆ ಕಾಯ್ದಿರಿಸಲಾದ ಜಮೀನಿನ ವಿವರ

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಜಮೀನಿನ ವಿಸ್ತೀರ್ಣ (ಎ.ಗುಂ) | |
|---|---|---|---|
| | | ಸರ್ಕಾರಿ | ಖಾಸಗಿ |
| 1 | ಚಿಕ್ಕಮಗಳೂರು | 27.31 | 3.04 |
| 2 | ಮೂಡಿಗೆರೆ | 88.22 | - |
| 3 | ಕಡೂರು | 14.22 | - |
| 4 | ಶೃಂಗೇರಿ | 104.11 | - |
| 5 | ತರಿಕೆರೆ | 35.01 | - |
| ಒಟ್ಟು | | **270.07** | **3.04** |

ಚಿಕ್ಕಮಗಳೂರು ಜಿಲ್ಲೆಯ ನಗರ ಪ್ರದೇಶದಲ್ಲಿ ನಿವೇಶನ ಹಂಚಿಕೆಗೆ ಕಾಯ್ದಿರಿಸಲಾದ ಜಮೀನಿನ ವಿವರ

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಜಮೀನಿನ ವಿಸ್ತೀರ್ಣ (ಎ.ಗುಂ) | |
|---|---|---|---|
| | | ಸರ್ಕಾರಿ | ಖಾಸಗಿ |
| 1 | ಚಿಕ್ಕಮಗಳೂರು | 27.22 | - |
| 2 | ಮೂಡಿಗೆರೆ | 15.00 | - |
| 3 | ಕಡೂರು | 5.00 | - |
| 4 | ಶೃಂಗೇರಿ | 7.20 | - |
| ಒಟ್ಟು | | **55.02** | - |

**LAQ - 329**

ಅನುಬಂಧ - 02

ಕಡೂರು ವಿಧಾನಸಭಾ ಕ್ಷೇತ್ರದ ಗ್ರಾಮೀಣ ಪ್ರದೇಶದಲ್ಲಿ ನಿವೇಶನ ಹಂಚಿಕೆಗೆ ಕಾಯ್ದಿರಿಸಲಾದ ಜಮೀನಿನ ವಿವರ

| ಕ್ರ.ಸಂ | ವಿಧಾನಸಭಾ ಕ್ಷೇತ್ರ | ಗ್ರಾಮ ಪಂಚಾಯತಿ | ಗ್ರಾಮ | ಸರ್ವೆ ನಂ | ಜಮೀನಿನ ವಿಸ್ತೀರ್ಣ (ಎ.ಗುಂ) | |
|---|---|---|---|---|---|---|
| | | | | | ಸರ್ಕಾರಿ | ಖಾಸಗಿ |
| 1 | ಕಡೂರು | ಬಳ್ಳಿಗನೂರು | ದೇವರಹಳ್ಳಿ | 6 | 1.35 | - |
| 2 | ಕಡೂರು | ಉಡುಗೆರೆ | ಉಡುಗೆರೆ | 182 | 5.03 | - |
| 3 | ಕಡೂರು | ಉಳಿಗೆರೆ | ಗೋಲ್ಲರಹಟ್ಟಿ | /ಪಿ | 2.24 | - |
| 4 | ಕಡೂರು | ಎಸ್. ಮಾದಾಪುರ | ರಂಗಾಪುರ | 174 | 3.00 | - |
| 5 | ಕಡೂರು | ಜಿಗಣೆಹಳ್ಳಿ | ಆಲಗಟ್ಟೆ | 15 | 2.00 | - |
| ಒಟ್ಟು | | | | | **14.27** | |

ಕಡೂರು ವಿಧಾನಸಭಾ ಕ್ಷೇತ್ರದ ನಗರ ಪ್ರದೇಶದಲ್ಲಿ ನಿವೇಶನ ಹಂಚಿಕೆಗೆ ಕಾಯ್ದಿರಿಸಲಾದ ಜಮೀನಿನ ವಿವರ

| ಕ್ರ.ಸಂ | ವಿಧಾನಸಭಾ ಕ್ಷೇತ್ರ | ಪಟ್ಟಣ | ಸರ್ವೆ ನಂ | ಜಮೀನಿನ ವಿಸ್ತೀರ್ಣ (ಎ.ಗುಂ) | |
|---|---|---|---|---|---|
| | | | | ಸರ್ಕಾರಿ | ಖಾಸಗಿ |
| 1 | ಕಡೂರು | ಬಿರೂರು | 4 ಪಿ | 15.00 | - |

Hanumanna BS

## ಕಡೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಜಮೀನನ್ನು ಕಾಯ್ದಿರಿಸುವ ಪ್ರಸ್ತಾವನೆಗಳ ವಿವರ

| ಕ್ರ.ಸಂ | ತಾಲ್ಲೂಕು | ಗ್ರಾಮ ಪಂಚಾಯತಿ | ಗ್ರಾಮ | ಸರ್ವೆ ನಂ | ಜಮೀನಿನ ವಿಸ್ತೀರ್ಣ (ಎ & ಗು) | | ಷರಾ |
|---|---|---|---|---|---|---|---|
| | | | | | ಸರ್ಕಾರಿ | ಖಾಸಗಿ | |
| 1 | ಕಡೂರು | ಬಿಸಲೇರಿ | ಜಿ.ಜಕ್ಕನಹಳ್ಳಿ | 34 | 1 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 2 | ಕಡೂರು | ಬಿಳುವಾಲ | ನಾಗಗೊಂಡನಹಳ್ಳಿ | 77 | 2 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 3 | ಕಡೂರು | ಹುಲ್ಲೇಹಳ್ಳಿ | ಹಂದಿಜೋಗಿಹಟ್ಟಿ | 4 | 1 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 4 | ಕಡೂರು | ಹುಲ್ಲೇಹಳ್ಳಿ | ಯರೇಹಳ್ಳಿ | 51 | 14.01 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 5 | ಕಡೂರು | ಹುಲ್ಲೇಹಳ್ಳಿ | ಬಿ.ಕೆ.ಹೊಸೂರು | 4/ಪಿ5 | 8 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 6 | ಕಡೂರು | ಹುಲ್ಲೇಹಳ್ಳಿ | ದಾಸರಹಟ್ಟಿ | 4/ಪಿ5 | 2.2 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 7 | ಕಡೂರು | ಕಡೂರಹಳ್ಳಿ | ದೊಂಬರಹಳ್ಳಿ | 1/ಪಿ1 | 3 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 8 | ಕಡೂರು | ಕಡೂರಹಳ್ಳಿ | ಕಡೂರಹಳ್ಳಿ | 157 | 15.06 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 9 | ಕಡೂರು | ಕಡೂರಹಳ್ಳಿ | ಜಿ.ತಮ್ಮಾಪುರ | 1 | 5.01 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 10 | ಕಡೂರು | ಕಡೂರಹಳ್ಳಿ | ಶ್ರೀರಾಂಪುರ | 215/ಪಿ1 | 0.24 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 11 | ಕಡೂರು | ಕಡೂರಹಳ್ಳಿ | ಆರ್.ಜಿ.ಕೊಪ್ಪಲು | 27 | 10 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 12 | ಕಡೂರು | ಉಳಿಗೆರೆ | ದೊಡ್ಡಪ್ಪನಹಳ್ಳಿ | 34 | 18 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 13 | ಕಡೂರು | ಕಾಮನಕೆರೆ | ಕಾಮನಕೆರೆ | 142 | 5 | - | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 14 | ಕಡೂರು | ನಿಡುವಳೆ | ಉಪ್ಪಿನಹಳ್ಳಿ | 76/7ಎ2 | - | 1.09 | ತಾಲ್ಲೂಕು ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| 15 | ಕಡೂರು | ಪುರ | ದೊಣ್ಣೆಕೋರನಹಳ್ಳಿ | 4/5 | - | 1.34 | ಜಿಲ್ಲಾಧಿಕಾರಿಗಳ ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ |
| ಒಟ್ಟು | | | | | **85.12** | **3.03** | |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 33 |
| ವಿಧಾನ ಸಭೆ ಸದಸ್ಯರು | : | ಶ್ರೀ.ಕುಮಾರ ಬಂಗಾರಪ್ಪ.ಎಸ್ (ಸೊರಬ) |
| ಉತ್ತರಿಸುವ ದಿನಾಂಕ | : | 12.09.2022 |
| ಉತ್ತರಿಸುವ ಸಚಿವರು | : | ಪಶುಸಂಗೋಪನಾ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ಪಶುಸಂಗೊಪನೆ ಇಲಾಖೆಯ ವೈದ್ಯರು, ನೌಕರರ ತೀವ್ರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು. |
| ಆ) | ಬಂದಿದ್ದಲ್ಲಿ ಶೇಕಡಾ 50% ಕ್ಕೂ ಅಧಿಕ ಕಟ್ಟಡಗಳು ದುರಸ್ಥಿಯಲ್ಲಿರುವುದು, ಮೂಲಭೂತ ಸೌಕರ್ಯದ ಕೊರತೆಯಿಂದ ಸಾರ್ವಜನಿಕರಿಗೆ ಸರ್ಕಾರದ ಕಾರ್ಯಕ್ರಮಗಳನ್ನು ತಲುಪಿಸಲು ಸಮಸ್ಯೆಗಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಜಾನುವಾರುಗಳಿಗೆ ಸೂಕ್ತ ಸಮಯದಲ್ಲಿ ಚಿಕಿತ್ಸೆ ನೀಡಲು ಪಶುವೈದ್ಯಾಧಿಕಾರಿಗಳ ಹುದ್ದೆ ಖಾಲಿ ಇರುವ ಕಡೆಗಳಲ್ಲಿ ಹತ್ತಿರದ ಪಶುವೈದ್ಯ ಸಂಸ್ಥೆಯಿಂದ ಅಧಿಕಾರಿ/ ಸಿಬ್ಬಂದಿಗಳನ್ನು ಪ್ರಭಾರದ/ನಿಯೋಜನೆ ಮೇರೆಗೆ ಕಾರ್ಯ ವ್ಯವಸ್ಥೆ ಮಾಡಿ ಚಿಕಿತ್ಸೆ ನೀಡಲಾಗುತ್ತಿರುತ್ತದೆ, ಅಲ್ಲದೇ ಇತ್ತೀಚಿನ ದಿನಮಾನಗಳಲ್ಲಿ ಸಂಚಾರಿ ಆಂಬುಲೆನ್ಸ್ ಮೂಲಕ ಸೇವೆಯನ್ನು ಒದಗಿಸಲು ಸಹ ಕ್ರಮಕೈಗೊಳ್ಳಲಾಗಿದೆ.<br><br>ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ಕಟ್ಟಡಗಳು ದುರಸ್ಥಿಯಲ್ಲಿರುವುದು ಗಮನಕ್ಕೆ ಬಂದಿದ್ದು, ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ಕಟ್ಟಡಗಳನ್ನು ದುರಸ್ಥಿಗೊಳಿಸಲು ಜಿಲ್ಲಾ ಪಂಚಾಯತ್ ಯೋಜನೆಯಿಂದ ಕ್ರಮವಹಿಸಲಾಗುತ್ತಿದೆ. (ವಿವರವನ್ನು ಅನುಬಂಧ-1 ರಲ್ಲಿ ನೀಡಲಾಗಿದೆ)<br><br>ದುರಸ್ಥಿ ಮಾಡಿಸಲು ಸಾಧ್ಯವಾಗದ ಸಂಸ್ಥೆಗಳನ್ನು ಆರ್.ಐ.ಡಿ.ಎಫ್ ಯೋಜನೆಯಡಿ ನೂತನ ಕಟ್ಟಡ ನಿರ್ಮಾಣಕ್ಕೆ ಕ್ರಮವಹಿಸಲಾಗಿರುತ್ತದೆ (ವಿವರವನ್ನು ಅನುಬಂಧ-2 ರಲ್ಲಿ ನೀಡಲಾಗಿದೆ) |
| ಇ) | ಹಾಗಿದ್ದಲ್ಲಿ, ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು) | |

| | | |
|---|---|---|
| | | ಆದರೆ, ಇದರಿಂದ ಸಾರ್ವಜನಿಕರಿಗೆ ಸರ್ಕಾರದ ಕಾರ್ಯಕ್ರಮಗಳನ್ನು ತಲುಪಿಸಲು ಯಾವುದೇ ಸಮಸ್ಯೆಗಳಾಗಿರುವುದಿಲ್ಲ. |

ಸಂಖ್ಯೆ: ಪಸಂಮೀ ಇ-128 ಪಸಸೇ 2022

(ಪ್ರಭು.ಬಿ.ಚವ್ಹಾಣ್)
ಪಶುಸಂಗೋಪನಾ ಸಚಿವರು

# ಅನುಬಂಧ-1

## ಶಿವಮೊಗ್ಗ ಜಿಲ್ಲೆಯಲ್ಲಿನ ಸೊರಬ ವಿಧಾನ ಸಭಾ ಕ್ಷೇತ್ರ ಹಾಗೂ ಕ್ಷೇತ್ರದ ತಾಳಗುಪ್ಪ ಹೋಬಳಿಯಲ್ಲಿ ಪಶುಪಾಲನಾ ಇಲಾಖಾ ಸಂಸ್ಥೆಗಳಲ್ಲಿ ಕೈಗೊಳ್ಳಲಾದ ದುರಸ್ತಿ ಮತ್ತು ಮೂಲಭೂತ ಸೌಕರ್ಯ ಕಾಮಗಾರಿಗಳ ಪಟ್ಟಿ

| ಕ್ರ. ಸಂ. | ಕೈಗೊಳ್ಳಲಿರುವ ಸಂಸ್ಥೆಯ ವಿವರ | ಕಾಮಗಾರಿಯ ವಿವರ | ದುರಸ್ತಿಗೆ ನಿಗದಿಯಾದ ಅನುದಾನ |
|---|---|---|---|
| 2020-21 | | | |
| 1 | ಪ್ರಾ.ಪ.ಚಿ, ಚಿಟ್ಟೂರು | ಟ್ರೇವೀಸ್ ಶೆಡ್ ಹಾಗೂ ಶೌಚಾಲಯ ದುರಸ್ತಿ & ನೆಲಹಾಸು ದುರಸ್ತಿ | 1.5 |
| 2 | ಪ್ರಾ.ಪ.ಚಿ, ಹುಲ್ತಿಕೊಪ್ಪ | ಶೌಚಾಲಯ ದುರಸ್ತಿ & ಕಟ್ಟಡದ ಮೇಲ್ಛಾವಣಿ ದುರಸ್ತಿ | 1.5 |
| 3 | ಪಶು ಆಸ್ಪತ್ರೆ, ಜಡೆ | ಕಾಂಪೌಂಡ್ ನಿರ್ಮಾಣದ ಮುಂದುವರಿದ ಕಾಮಗಾರಿ, ನೀರಿನ ಸಂಪು ನಿರ್ಮಾಣ | 1.5 |
| 4 | ಪ್ರಾ.ಪ.ಚಿ, ಬಾರಂಗಿ | ಕಾಂಪೌಂಡ್ ಮತ್ತು ಗೇಟ್ ನಿರ್ಮಾಣ. | 1.5 |
| 5 | ಪಶು ಆಸ್ಪತ್ರೆ, ಆನವಟ್ಟಿ | ಕಾಂಪೌಂಡ್ ನಿರ್ಮಾಣ. | 1.5 |
| 6 | ಪಶು ಆಸ್ಪತ್ರೆ, ತಾಳಗುಪ್ಪ | ಕಟ್ಟಡಕ್ಕೆ ಟಾಟಾ ಶೀಟ್ ಮೇಲ್ಛಾವಣಿ ಅಳವಡಿಕೆ | 1.5 |
| ಒಟ್ಟು | | | 9 |
| 2021-22 | | | |
| 1 | ಪಶು ಆಸ್ಪತ್ರೆ, ಜಡೆ | ಮೇಲ್ಛಾವಣಿ ನಿರ್ಮಿಸುವುದು,ನೀರಿನ ವ್ಯವಸ್ಥೆಗೆ ಪಂಪು ಮತ್ತು ಟ್ಯಾಂಕ್ | 1 |
| 2 | ಪಶು ಚಿಕಿತ್ಸಾಲಯ, ಉದ್ರಿ | ಕುಡಿಯುವ ನೀರಿನ ವ್ಯವಸ್ಥೆ,ಟ್ರೇವೀಸ್ ಶೆಡ್ ರಿಪೇರಿ,ಹೊಸ ಶೌಚಾಲಯ ನಿರ್ಮಾಣ | 1.5 |
| 3 | ಪಶು ಆಸ್ಪತ್ರೆ, ಆನವಟ್ಟಿ | ಕಂಪೌಂಡಿಗೆ ಮತ್ತು ಗೋಡೆಗೆ ಬಣ್ಣ ಹೊಡಿಸುವುದು ಹಾಗೂ ದುರಸ್ತಿ. | 1 |
| 4 | ಪಶು ಚಿಕಿತ್ಸಾಲಯ, ಮಾವಲಿ | ಡೋರ್ ರಿಪೇರಿ ಕುಡಿಯುವ ನೀರಿನ ವ್ಯವಸ್ಥೆ ಟ್ರೇವೀಸ್ ಶೆಡ್ ರಿಪೇರಿ,ಕರೆಂಟ್ ರಿಪೇರಿ. | 1.5 |
| 5 | ಪಶು ಆಸ್ಪತ್ರೆ, ಸೊರಬ | ಗೋಡೆಗೆ ಬಣ್ಣ ಹೊಡಿಸುವುದು ಹಾಗೂ ದುರಸ್ತಿ. | 2.5 |

| | | | |
|---|---|---|---|
| 6 | ಪಶು ಆಸ್ಪತ್ರೆ, ತಾಳಗುಪ್ಪ | ತಾಳಗುಪ್ಪ ಪಶುವೈದ್ಯ ಸಂಸ್ಥೆಗೆ ನೀರಿನ ಪಂಪ್ ದುರಸ್ತಿ ಮತ್ತು ಕಟ್ಟಡಕ್ಕೆ ಸುಣ್ಣ ಬಣ್ಣ | 0.5 |
| 7 | ಪಶು ಚಿಕಿತ್ಸಾಲಯ, ಶಿರವಂತೆ | ಶಿರವಂತೆ ಪಶುವೈದ್ಯ ಸಂಸ್ಥೆಗೆ ಶೌಚಾಲಯ ದುರಸ್ತಿ, ನೀರಿನ ತೊಟ್ಟಿ ದುರಸ್ತಿ | 1 |
| ಒಟ್ಟು | | | **9** |
| **2022-23** | | | |
| 1 | ಪಶು ಆಸ್ಪತ್ರೆ, ಚಂದ್ರುಗುತ್ತಿ | ಎಲೆಕ್ಟ್ರಿಕಲ್ ವರ್ಕ್, ವೈರಿಂಗ್, ವಾಟರ್ ಸಪ್ಲೇ, ಮೋಟಾರ್ ರಿಪ್ಲೇಸ್ಮೆಂಟ್, | 1 |
| 2 | ಪಶು ಆಸ್ಪತ್ರೆ, ಜಡೆ | ವಾಟರ್ ಪಂಪ್ ರಿಪ್ಲೇಸ್ಮೆಂಟ್ & ಪ್ಲಂಬಿಂಗ್‌ವರ್ಕ್ | 1 |
| 3 | ಪಶು ಆಸ್ಪತ್ರೆ, ಉಳವಿ | ಟ್ರೇವಿಸ್ ಶೇಡ್ ರೂಫಿಂಗ್, & ಮೋಟಾರ್ ಪಂಪ್ಸೆಟ್ ಪ್ಲಂಬಿಂಗ್‌ವರ್ಕ್ | 1 |
| 4 | ಪಶು ಆಸ್ಪತ್ರೆ, ಆನವಟ್ಟಿ | ಡೋರ್ಸ್ ರಿಪ್ಯೆರ್ ಅಥವಾ ರಿಪ್ಲೇಸ್ಮೆಂಟ್ ಮತ್ತು ಸುಣ್ಣ ಬಣ್ಣ | 1 |
| 5 | ಪಶು ಚಿಕಿತ್ಸಾಲಯ, ಶಿಗ್ಗಾ | ಮ್ಯೆನ್ ಡೋರ್ ರಿಪ್ಲೇಸ್ಮೆಂಟ್ ಮತ್ತು ಅದರ್ ಡೋರ್ಸ್ ರಪ್ಯೆರ್ | 1 |
| 6 | ಪಶು ಚಿಕಿತ್ಸಾಲಯ, ತತ್ತೂರು | ಡೋರ್ಸ್ ರಪ್ಯೆರ್ ಅಥವಾ ರಿಪ್ಲೇಸ್ಮೆಂಟ್ ಮತ್ತು ಸುಣ್ಣ ಬಣ್ಣ | 1 |
| 7 | ಪಶು ಚಿಕಿತ್ಸಾಲಯ, ಎಣ್ಣೆಕೊಪ್ಪ | ವಾಟರ್ ಸಪ್ಲೇ ಮತ್ತು ಮೋಟಾರ್ ಪ್ಲಂಬಿಂಗ್‌ವರ್ಕ್ ಮತ್ತು ಸುಣ್ಣ ಬಣ್ಣ | 1 |
| 8 | ಪ್ರಾ.ಪ.ಚಿ, ಹೊಸಬಾಳೆ | ಎಲೆಕ್ಟ್ರಿಕಲ್ ವರ್ಕ್ ವಾಟರ್ ಸಪ್ಲೇ, ಪ್ಲಂಬಿಂಗ್‌ವರ್ಕ್ ಮತ್ತು ಸುಣ್ಣ ಬಣ್ಣ | 1 |
| 9 | ತಾಳಗುಪ್ಪ | ತಾಳಗುಪ್ಪ ಪಶುವೈದ್ಯ ಸಂಸ್ಥೆಗೆ ಕಾಪೌಂಡ್ ನಿರ್ಮಾಣ, ಸುಣ್ಣ, ಬಣ್ಣ ಮಾಡಿಸುವುದು | 3 |
| ಒಟ್ಟು | | | **11** |

## ಅನುಬಂಧ-02

## ಸೊರಬ ತಾಲ್ಲೂಕಿನಲ್ಲಿ ಆರ್.ಐ.ಡಿ.ಎಫ್ ಯೋಜನೆಯಡಿ ನಿರ್ಮಾಣವಾದ ಕಟ್ಟಡಗಳ ವಿವರ.

## ಜಿಲ್ಲೆ: ಶಿವಮೊಗ್ಗ

| ಕ್ರ. ಸಂ. | ಟ್ರಾಂಚ್ | ವಿಧಾನ ಸಭಾ ಕ್ಷೇತ್ರ | ಸಂಸ್ಥೆಯ ಹೆಸರು | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|---|
| 1 | 11 | ಸೊರಬ | ಶಿಗ್ಗಾ | ಪೂರ್ಣಗೊಂಡಿದೆ |
| 2 | 11 | | ಚಂದ್ರಗುತ್ತಿ | |
| 3 | 12 | | ಆನವಟ್ಟಿ | |
| 4 | 14 | | ಬಾರಂಗಿ | |
| 5 | 19 | | ತತ್ತೂರು | |
| 6 | 23 | | ಉಳವಿ | |
| 7 | 24 | | ಕುಪ್ಪಗಡ್ಡೆ | |
| 8 | 25 | | ತವನಂದಿ | |
| 9 | | | ಇಂಡೀಹಳ್ಳಿ | |
| 10 | 28 | | ಗುಡವಿ | ಆರ್.ಐ.ಡಿ.ಎಫ್ -28 ಯೋಜನೆಯಡಿ ಮಂಜೂರಾತಿಗೆ ಪ್ರಸ್ತಾವನೆಯನ್ನು ಸಲ್ಲಿಸಿದೆ. |
| 11 | | | ಮೂಡಿ | |
| 12 | | | ಹರೀಷಿ | |
| 13 | | | ಮಾವಲಿ | |
| 14 | | | ಎಣ್ಣೆಕೊಪ್ಪ | |

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ.ಎಸ್ (ಸೊರಬ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **34** |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ವಸತಿ ಯೋಜನೆಯ ಸರ್ಕಾರದ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡುವ ಸಂದರ್ಭದಲ್ಲಿ ಇಲಾಖೆಯ ಅಧಿಕಾರಿಗಳು ತಾಂತ್ರಿಕ ಮತ್ತು ಇನ್ನಿತರ ಸಮಸ್ಯೆಗಳ ಕುರಿತು ಮಾಹಿತಿ ನೀಡಿದ್ದರೂ ರಾಜೀವ್ ಗಾಂಧಿ ವಸತಿ ನಿಗಮದ ಅಧಿಕಾರಿಗಳು ಸ್ಪಂದಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ರಾಜೀವ್ ಗಾಂಧಿ ವಸತಿ ನಿಗಮವು ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ವಸತಿ ಯೋಜನೆಯ ಸರ್ಕಾರದ ಕಾರ್ಯಕ್ರಮಗಳನ್ನುಅನುಷ್ಠಾನಗೊಳಿಸುತ್ತಿದ್ದು, ಅನುಷ್ಠಾನದ ಸಂದರ್ಭದಲ್ಲಿ ಬರುವ ತಾಂತ್ರಿಕ ಮತ್ತು ಇನ್ನಿತರ ಸಮಸ್ಯೆಗಳನ್ನು ಬಗೆಹರಿಸಲು ಸಹಾಯವಾಣಿಯನ್ನು ತೆರೆಯಲಾಗಿದ್ದು, ಪ್ರತಿ ನಿತ್ಯ ನಿಗಮಕ್ಕೆ ಬರುವ ಕರೆಗಳನ್ನು ಸ್ವೀಕರಿಸಿ ಅಹವಾಲುಗಳನ್ನು ಪರಿಹರಿಸಲಾಗುತ್ತಿದೆ.<br><br>ಕಳೆದ ಒಂದು ತಿಂಗಳಿನಿಂದ ನಿಗಮಕ್ಕೆ ಸ್ವೀಕರಿಸಲಾದ ಅಹವಾಲುಗಳು ಹಾಗೂ ಪರಿಹರಿಸಲಾದ ಅಹವಾಲುಗಳ ವಿವರ ಕೆಳಕಂಡಂತಿದೆ. |

| SI NO | User Name | Solved | Not Solved | Total |
|---|---|---|---|---|
| 1 | User1 | 2131 | 58 | 2189 |
| 2 | User2 | 2362 | 39 | 2401 |
| 3 | User3 | 2079 | 63 | 2142 |
| 4 | User4 | 2226 | 50 | 2276 |
| 5 | User5 | 2357 | 27 | 2384 |
| | **Total** | **11155** | **237** | **11392** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ರಾಜೀವ್ ಗಾಂಧಿ ವಸತಿ ನಿಗಮವನ್ನು ದೂರವಾಣಿ ಮೂಲಕ ಸಂಪರ್ಕಿಸಲು ಅಧಿಕಾರಿಗಳು ಪ್ರಯತ್ನಿಸಿದರು ಸ್ಪಂದಿಸದೆ ಇರುವುದು ಹಾಗೂ ಶಾಸಕರ ಪತ್ರಗಳಿಗೂ ಉತ್ತರಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ರಾಜೀವ್ ಗಾಂಧಿ ವಸತಿ ನಿಗಮವು ರಾಜ್ಯದಲ್ಲಿ ತನ್ನ ಯಾವುದೇ ಜಿಲ್ಲಾ ಅಥವಾ ತಾಲ್ಲೂಕು ಮಟ್ಟದ ಕಛೇರಿಯನ್ನಾಗಲೀ ಅಥವಾ ಸಿಬ್ಬಂದಿಯನ್ನಾಗಲೀ ಹೊಂದಿರುವುದಿಲ್ಲ. ವಸತಿ ಯೋಜನೆಗಳನ್ನು ಜಿಲ್ಲೆಗಳಲ್ಲಿ ಜಿಲ್ಲಾ ಪಂಚಾಯಿತಿ/ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳ ಸಹಯೋಗದೊಡನೆ ಅನುಷ್ಠಾನಗೊಳಿಸಲಾಗುತ್ತಿದೆ.<br><br>ಇದಲ್ಲದೇ ನಿಗಮದಲ್ಲಿ ಗುತ್ತಿಗೆ ಆಧಾರದ ಮೇಲೆ ಸಿಬ್ಬಂದಿಗಳನ್ನು ನೇಮಿಸಿಕೊಂಡು ಪ್ರತಿ ನಿತ್ಯ ನಿಗಮಕ್ಕೆ ಬರುವ ಪತ್ರ ವ್ಯವಹಾರಗಳನ್ನು ಹಾಗೂ ಕರೆಗಳನ್ನು ಸ್ವೀಕರಿಸಿ ಪರಿಹರಿಸಲು ಕ್ರಮ ವಹಿಸಲಾಗುತ್ತಿದೆ.<br><br>ಮುಂದುವರೆದು, ತಾಲ್ಲೂಕುಗಳಲ್ಲಿ ಅನುಷ್ಠಾನಗೊಳ್ಳುತ್ತಿರುವ ಯೋಜನೆಗಳ ಪರಿಶೀಲನೆ ಮೇಲ್ವಿಚಾರಣೆ ಹಾಗೂ ಉಸ್ತುವಾರಿಗಾಗಿ ಪ್ರತಿ ತಾಲ್ಲೂಕುಗಳಲ್ಲಿ ನಿರ್ಮಿತಿ ಕೇಂದ್ರಗಳ ಮೂಲಕ ಗುತ್ತಿಗೆ ಆಧಾರದ ಮೇಲೆ ತಾಲ್ಲೂಕು ನೋಡಲ್ ಅಧಿಕಾರಿಗಳನ್ನು ನೇಮಿಸಲಾಗಿದ್ದು ಅಲ್ಲಿನ ಸಮಸ್ಯೆಗಳಿಗೆ ತಾಲ್ಲೂಕು ಮಟ್ಟದಲ್ಲೇ ಬಗೆಹರಿಸಲು ಕ್ರಮ ವಹಿಸಲಾಗುತ್ತಿದೆ. ಮಾನ್ಯ ಶಾಸಕರುಗಳ ಕೋರಿಕೆಗಳನ್ನು ಆಧ್ಯತೆ ಮೇರೆಗೆ ಪರಿಗಣಿಸಲಾಗುತ್ತಿದೆ. |
| ಇ) | ಬಂದಿದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು ; | |

| | | |
|---|---|---|
| ಈ) | ವಸತಿ ಯೋಜನೆಗೆ ಸಂಬಂಧಿಸಿದಂತೆ ಸೊರಬ ವಿಧಾನ ಸಭಾ ಕ್ಷೇತ್ರದ ಫಲಾನುಭವಿಗಳ ಮಾಹಿತಿಯೊಂದಿಗೆ ಜಿಲ್ಲಾ ಪಂಚಾಯತ್‌ಗೆ ಕಳುಹಿಸಿ 6 ತಿಂಗಳು ಕಳೆದರೂ, ನಿಗಮಕ್ಕೆ ಕಳುಹಿಸದೆ ಇರುವುದು, ನಿಗಮದವರು ಸಹಾ ಕ್ರಮವಾಗಿ ಉತ್ತರಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಸೊರಬ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ವಸತಿ ಯೋಜನೆಯಡಿ ಫಲಾನುಭವಿಗಳಿಗೆ GPS Not Ok, House extension, Aadhar mismatch, GPS Latitude/long latitude mismatch ಹೀಗೆ ಅನೇಕ ಸಮಸ್ಯೆಗಳಿಂದ ಈ ಕೆಳಗೆ ತಿಳಿಸಿದಂತೆ ಅನುದಾನವು ಬಿಡುಗಡೆಯಾಗಿರುವುದಿಲ್ಲ.<br><br>House extension: 106; Bank Aadhar mismatch: 9; GPS Not Ok: 1; GPS Latitude/lo[n] latitude mismat[ch]: 16 |
| ಉ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು) | ಈ ಬಗ್ಗೆ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳಿಗೆ ಪತ್ರ ಬರೆಯಲಾಗಿದ್ದು, ಜಿಲ್ಲಾ ಪಂಚಾಯಿತಿಯಿಂದ ಪರಿಶೀಲಿಸಿ, ನೀಡುವ ವರದಿಯ ಆಧಾರದ ಮೇಲೆ ಅರ್ಹ ಫಲಾನುಭವಿಗಳು ನಿಯಮಾನುಸಾರ ಮನೆ ನಿರ್ಮಾಣ ಮಾಡಿರುವುದು ಕಂಡು ಬಂದಲ್ಲಿ, ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಲಾಗುವುದು. |

| House extension | Bank Aadhar mismatch | GPS Not Ok | GPS Latitude/lo[n] latitude mismat[ch] |
|---|---|---|---|
| 106 | 9 | 1 | 16 |

ಸಂಖ್ಯೆ :ವಇ 345 ಹೆಚ್‌ಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಶ್ರೀಮಂತ್ ಬಾಳಾಸಾಹೇಬ್ ಪಾಟೀಲ್ (ಕಾಗವಾಡ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **35** |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 2 ವರ್ಷಗಳಲ್ಲಿ ಬೆಳಗಾವಿ ಜಿಲ್ಲೆ ಕಾಗವಾಡ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ವಿವಿಧ ವಸತಿ ಯೋಜನೆ ಅಡಿಯಲ್ಲಿ ಮಂಜೂರು ಮಾಡಲಾಗಿರುವ ಮನೆಗಳ ಸಂಖ್ಯೆ ಎಷ್ಟು; (ಯೋಜನೆವಾರು ಮಾಹಿತಿಯನ್ನು ನೀಡುವುದು) | ಕಳೆದ ಎರಡು ವರ್ಷಗಳಲ್ಲಿ ಬೆಳಗಾವಿ ಜಿಲ್ಲೆಯ, ಕಾಗವಾಡ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ವಿವಿಧ ವಸತಿ ಯೋಜನೆ ಅಡಿಯಲ್ಲಿ ಒಟ್ಟು 1125 ಮನೆಗಳನ್ನು ಮಂಜೂರು ಮಾಡಲಾಗಿದ್ದು, ಯೋಜನಾವಾರು ಮಾಹಿತಿ ಕೆಳಕಂಡಂತಿದೆ. <br><br> **ಯೋಜನೆ** / **ಗುರಿ**: ಬಸವ ವಸತಿ ಯೋಜನೆ – 681; ಡಾ\|\| ಬಿ.ಆರ್ ಅಂಬೇಡ್ಕರ್‌ನಿವಾಸ್ ಗ್ರಾಮೀಣ – 219; ಡಾ\|\| ಬಿ.ಆರ್ ಅಂಬೇಡ್ಕರ್ ನಿವಾಸ್ ನಗರ – 54; ವಾಜಪೇಯಿ ನಗರ ವಸತಿ – 171; **ಒಟ್ಟು – 1125** <br><br> 2021-22 ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆ ಕಾಗವಾಡ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪ್ರಧಾನ ಮಂತ್ರಿ ಆವಾಸ ಯೋಜನೆಯಡಿ ಯೋಜನೆ(ನಗರ)ರ ಅಡಿಯಲ್ಲಿ ಒಟ್ಟು 213 ಮನೆಗಳನ್ನು ಮಂಜೂರು ಮಾಡಲಾಗಿದೆ. |
| ಆ) | ಬಸವ ವಸತಿ ಯೋಜನೆ ಹಾಗೂ ವಾಜಪೇಯಿ ವಸತಿ ಯೋಜನೆ ಅಡಿಯಲ್ಲಿ ಮನೆಗಳನ್ನು ಹಂಚಿಕೆ ಮಾಡುವಂತೆ ಕಳೆದ 2 ವರ್ಷಗಳಿಂದ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸದರಿ ಪ್ರಸ್ತಾವನೆಯ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು; (ವಿವರ ಒದಗಿಸುವುದು) | 2021-22 ನೇ ಸಾಲಿನಲ್ಲಿ ಒಟ್ಟು **1338** ಮನೆಗಳು ಮಂಜೂರು ಮಾಡಲಾಗಿದೆ. ಮಾನ್ಯ ಶಾಸಕರು, ಕಾಗವಾಡ ವಿಧಾನ ಸಭಾ ಕ್ಷೇತ್ರ ಇವರು ಬಸವ ವಸತಿ ಯೋಜನೆಯಡಿ ಒಟ್ಟು **3500** ಹಾಗೂ ವಾಜಪೇಯಿ ನಗರ ವಸತಿ ಯೋಜನೆಯಡಿ ಒಟ್ಟು **1500** ಮನೆಗಳನ್ನು ಹೆಚ್ಚುವರಿಯಾಗಿ ಹಂಚಿಕೆ ಮಾಡುವಂತೆ ಕೋರಿಕೆ ಸಲ್ಲಿಸಿದ್ದು, ಪ್ರಸ್ತಾವನೆ ಪರಿಶೀಲನೆಯಲ್ಲಿರುತ್ತದೆ. |
| ಇ) | ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರೂ ಸಹ ಇಲ್ಲಿಯವರೆಗೆ ಮನೆಗಳನ್ನು ಹಂಚಿಕೆ ಮಾಡದಿರಲು ಕಾರಣವೇನು? (ಮಾಹಿತಿ ನೀಡುವುದು) | |

ಯೋಜನೆವಾರು ವಿವರ:

| ಯೋಜನೆ | ಗುರಿ |
|---|---|
| ಬಸವ ವಸತಿ ಯೋಜನೆ | 681 |
| ಡಾ\|\| ಬಿ.ಆರ್ ಅಂಬೇಡ್ಕರ್‌ನಿವಾಸ್ ಗ್ರಾಮೀಣ | 219 |
| ಡಾ\|\| ಬಿ.ಆರ್ ಅಂಬೇಡ್ಕರ್ ನಿವಾಸ್ ನಗರ | 54 |
| ವಾಜಪೇಯಿ ನಗರ ವಸತಿ | 171 |
| **ಒಟ್ಟು** | **1125** |

ಸಂಖ್ಯೆ :ವಇ 346 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ರವೀಂದ್ರನಾಥ್ ಎಸ್.ಎ (ದಾವಣಗೆರೆ ಉತ್ತರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **36** |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಾವಣಗೆರೆ ಉತ್ತರ ವಿಧಾನ ಸಭಾ ಕ್ಷೇತ್ರದ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿರುವ ವಸತಿ ರಹಿತರ ಸಂಖ್ಯೆ ಎಷ್ಟು; ವಸತಿ ಸೌಲಭ್ಯ ಕೋರಿ ಸಲ್ಲಿಸಿರುವ ಅರ್ಜಿಗಳ ಸಂಖ್ಯೆ ಎಷ್ಟು; (ಸಂಪೂರ್ಣ ವಿವರ ನೀಡುವುದು) | 2018 ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ರಾಜ್ಯದಾದ್ಯಂತ ನಡೆಸಿದ ವಸತಿರಹಿತರ ಸಮೀಕ್ಷೆಯನ್ವಯ ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರದ ಗ್ರಾಮೀಣ ಪ್ರದೇಶದಲ್ಲಿ 1084 ವಸತಿರಹಿತರು ಮತ್ತು 1689 ನಿವೇಶನರಹಿತರು ಹಾಗೂ ದಾವಣಗೆರೆ ಮಹಾನಗರ ವ್ಯಾಪ್ತಿಯಲ್ಲಿ ಬೇಡಿಕೆ ಸಮೀಕ್ಷೆಯನ್ವಯ ಒಟ್ಟು 3828 ವಸತಿರಹಿತರು ಮತ್ತು 27853 ನಿವೇಶನರಹಿತರು ಕಂಡು ಬಂದಿರುತ್ತದೆ. ಇವೆಲ್ಲವೂ ವಸತಿ ಹಾಗೂ ನಿವೇಶನ ಸೌಲಭ್ಯ ಕೋರಿ ಸಲ್ಲಿಸಿರುವ ಅರ್ಜಿಗಳಾಗಿರುತ್ತವೆ.<br><br>ಸರ್ಕಾರವು ಆಯವ್ಯಯದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ವಿವಿಧ ವಸತಿ ಯೋಜನೆಗಳಡಿ ಹಂತ ಹಂತವಾಗಿ ವಸತಿ ಸೌಲಭ್ಯವನ್ನು ಕಲ್ಪಿಸಲು ಕ್ರಮ ವಹಿಸಲಾಗುತ್ತಿದೆ. |
| ಆ) | ಸದರಿ ಕ್ಷೇತ್ರದ ವ್ಯಾಪ್ತಿಯಲ್ಲಿರುವ ನಿವೇಶನ ರಹಿತರ ಸಂಖ್ಯೆ ಎಷ್ಟು; ನಿವೇಶನ ಕೋರಿ ಸಲ್ಲಿಸಿರುವ ಅರ್ಜಿಗಳ ಸಂಖ್ಯೆ ಎಷ್ಟು; ಸರ್ಕಾರ ವಹಿಸಿರುವ ಕ್ರಮವೇನು; (ವಿವರ ನೀಡುವುದು) | ನಿವೇಶನರಹಿತರಿಗೆ ನಿವೇಶನ ಸೌಕರ್ಯವನ್ನು ಒದಗಿಸಲು ಗ್ರಾಮೀಣ ಮತ್ತು ನಗರ ನಿವೇಶನ ಯೋಜನೆಗಳಡಿ ಸ್ಥಳೀಯವಾಗಿ ಲಭ್ಯವಿರುವ ಸರ್ಕಾರಿ ಜಮೀನು ಮಂಜೂರಾತಿ ಮಾಡಿ ನಿವೇಶನ ಹಂಚಿಕೆಗೆ ಕ್ರಮವಹಿಸಲಾಗುತ್ತಿದೆ. ಒಂದು ವೇಳೆ ಸರ್ಕಾರಿ ಜಮೀನು ಲಭ್ಯವಿಲ್ಲದ ಕಡೆಗಳಲ್ಲಿ ಖಾಸಗೀ ಜಮೀನು ಖರೀದಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಜಮೀನು ಖರೀದಿ ಸಮಿತಿಯನ್ನು ರಚಿಸಿದ್ದು, ಆ ಮೂಲಕ ಖರೀದಿಸಿ ಹಂಚಿಕೆಗೆ ಕ್ರಮವಹಿಸಲಾಗುತ್ತಿದೆ. ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಒಟ್ಟು 50.13.03 ಎಕರೆ ಜಮೀನು ಖರೀದಿಗೆ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನಾಧರಿಸಿ ಒಟ್ಟು ರೂ.18.87 ಕೋಟಿಗಳನ್ನು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ. |
| ಇ) | ಕ್ಷೇತ್ರದ ವ್ಯಾಪ್ತಿಯಲ್ಲಿ ನಿವೇಶನ ಹೊಂದಿದ್ದು ಮನೆಗಳ ನಿರ್ಮಾಣಕ್ಕೆ ಸಹಾಯಧನ ಕೋರಿ ಸಲ್ಲಿಸಿದ ಅರ್ಜಿಗಳ ಸಂಖ್ಯೆ ಎಷ್ಟು; ಮಂಜೂರಾದ ಸಂಖ್ಯೆ ಎಷ್ಟು; ಬಾಕಿ ಫಲಾನುಭವಿಗಳಿಗೆ ಯಾವ ಕಾಲಮಿತಿಯಲ್ಲಿ ಸಹಾಯಧನ ಮಂಜೂರು ಮಾಡಲಾಗುವುದು; (ವಿವರ ನೀಡುವುದು) | ದಾವಣಗೆರೆ ಉತ್ತರ ವಿಧಾನ ಸಭಾ ಕ್ಷೇತ್ರದ ಗ್ರಾಮೀಣ ಪ್ರದೇಶದಲ್ಲಿ 1084 ವಸತಿರಹಿತರು ಹಾಗೂ ದಾವಣಗೆರೆ ಮಹಾನಗರ ವ್ಯಾಪ್ತಿಯಲ್ಲಿ ನಿವೇಶನ ಹೊಂದಿದ್ದು ಮನೆಗಳ ನಿರ್ಮಾಣಕ್ಕೆ ಸಹಾಯಧನ ಕೋರಿ ಒಟ್ಟು 3828 ಅರ್ಜಿಗಳು ಸ್ವೀಕೃತವಾಗಿರುತ್ತವೆ.<br><br>2018 ರ ಸಮೀಕ್ಷೆಯ ದಾವಣಗೆರೆ ಉತ್ತರ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ವಿವಿಧ ವಸತಿ ಯೋಜನೆಗಳಡಿ ಒಟ್ಟು 1589 ಮನೆಗಳನ್ನು ಮಂಜೂರು ಮಾಡಲಾಗಿದೆ. ಭೌತಿಕ ಪ್ರಗತಿ ವಿವರ ಕೆಳಕಂಡಂತಿದೆ. |
| ಈ) | ವಿವಿಧ ವಸತಿ ಯೋಜನೆಗಳಡಿಯಲ್ಲಿ ಸಹಾಯಧನ ಮಂಜೂರಾಗಿದ್ದು, ಮನೆ ನಿರ್ಮಾಣ ಪ್ರಾರಂಭ ಮಾಡಿ, ಸಹಾಯಧನ ಬಿಡುಗಡೆ | (see table below) |

| ಯೋಜನೆ | ಶ್ರೇಣಿ | ಆಯ್ಕೆ | ಪೂರ್ಣ | ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗದ ಮನೆಗಳು | ಬ್ಲಾಕ್ |
|---|---|---|---|---|---|---|
| ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ-ಗ್ರಾ | 2021-22 | 55 | 0 | 10 | 44 | 1 |
| ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ-ನ | 2021-22 | 38 | 0 | 7 | 28 | 3 |

| | | | | | | | |
|---|---|---|---|---|---|---|---|
| | ಮಾಡದೇ ಅಪೂರ್ಣಗೊಂಡಿರುವ ಮನೆಗಳ ಸಂಖ್ಯೆ ಎಷ್ಟು; ಸದರಿಯವರಿಗೆ ಯಾವ ಕಾಲಮಿತಿಯಲ್ಲಿ ಪೂರ್ಣ ಅನುದಾನ ಬಿಡುಗಡೆ ಮಾಡಲಾಗುವುದು ? (ವಿವರ ನೀಡುವುದು) | ದೇವರಾಜು ಅರಸು ವಸತಿ ಯೋಜನೆ-ಗ್ರಾ | 2019-20 | 1 | 1 | 0 | 0 | 0 |
| | | ದೇವರಾಜು ಅರಸು ವಸತಿ ಯೋಜನೆ-ನ | 2020-21 | 2 | 0 | 2 | 0 | 0 |
| | | ಪ್ರಧಾನ ಮಂತ್ರಿ ಅವಾಸ್ ಯೋಜನೆ-ಗ್ರಾ | 2019-20 | 1 | 0 | 0 | 0 | 1 |
| | | ಬಸವ ವಸತಿ ಯೋಜನೆ | 2021-22 | 182 | 0 | 30 | 150 | 2 |
| | | ವಾಜಪೇಯಿ ನಗರ ವಸತಿ ಯೋಜನೆ | 2021-22 | 96 | 0 | 8 | 87 | 1 |
| | | ಪ್ರಧಾನ ಮಂತ್ರಿ ಅವಾಸ್ ಯೋಜನೆ-ನಗರ Non Convergence | 2019-20 | 827 | 223 | 196 | 408 | 0 |
| | | | 2020-21 | 132 | 34 | 38 | 60 | 0 |
| | | | 2021-22 | 255 | 54 | 98 | 103 | 0 |
| | | **ಒಟ್ಟು** | | **1589** | **312** | **389** | **880** | **8** |

ಮೇಲ್ಕಂಡ ವಸತಿ ಯೋಜನೆಗಳಡಿ 2019-20 ರಿಂದ ಆಗಸ್ಟ್ 2022 ಅಂತ್ಯಕ್ಕೆ ವಿವಿಧ ವಸತಿ ಯೋಜನೆಗಳಡಿ ಹಿಂದಿನ ಶ್ರೇಣಿಯನ್ನೊಳಗೊಂಡಂತೆ ಅನುಮೋದನೆಗೊಂಡ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಗೆ ಅನುಗುಣವಾಗಿ ನೇರವಾಗಿ ಫಲಾನುಭವಿಗಳಿಗೆ ರೂ.1164.93 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಆಶ್ರಯ-ವಿಜಿಲ್ ಆ್ಯಪ್ ಮೂಲಕ ಜಿ.ಪಿ.ಎಸ್ ಮಾಡಿದ ಹಾಗೂ ಆಧಾರ್ ಜೋಡಣೆಯಾದ ಅರ್ಹ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿದ್ದು, ಕೇಂದ್ರ ಸರ್ಕಾರದ ಯೋಜನೆಗಳನ್ನು ಹೊರತುಪಡಿಸಿ ಅನುದಾನ ಬಿಡುಗಡೆಗೆ ಯಾವುದೇ ಬಾಕಿ ಇರುವುದಿಲ್ಲ.

ಸಂಖ್ಯೆ :ವಇ 347 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಪುಟ್ಟರಂಗಶೆಟ್ಟಿ.ಸಿ (ಚಾಮರಾಜನಗರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 37 |
| ಉತ್ತರಿಸಬೇಕಾದ ದಿನಾಂಕ | : | 12.09.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ಚಾಮರಾಜನಗರ ಕ್ಷೇತ್ರಕ್ಕೆ ವಿವಿಧ ಯೋಜನೆಗಳಡಿಯಲ್ಲಿ ಮಂಜೂರಾಗಿರುವ ಮನೆಗಳು ಎಷ್ಟು; (ಗ್ರಾಮವಾರು, ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | ಚಾಮರಾಜನಗರ ಕ್ಷೇತ್ರಕ್ಕೆ 2019-20 ನೇ ಸಾಲಿನಿಂದ 2021-22 ನೇ ಸಾಲಿನವರೆಗೆ ವಿವಿಧ ವಸತಿ ಯೋಜನೆಗಳಡಿಯಲ್ಲಿ 1279 ಮನೆಗಳನ್ನು ಮಂಜೂರು ಮಾಡಲಾಗಿದೆ.<br><br>**ಯೋಜನೆ** — **ಮಂಜೂರಾದ ಮನೆಗಳು**<br>ಬಸವ ವಸತಿ ಯೋಜನೆ — 662<br>ಡಾ. ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ — 205<br>ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) — 412<br>**ಒಟ್ಟು** — **1279**<br><br>ಗ್ರಾಮವಾರು, ತಾಲ್ಲೂಕುವಾರು ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| ಆ) | ಚಾಮರಾಜನಗರ ಕ್ಷೇತ್ರಕ್ಕೆ ವಿವಿಧ ವಸತಿ ಯೋಜನೆಗಳಿಗೆ ಬಿಡುಗಡೆಯಾದ ಹಾಗೂ ಬಾಕಿ ಇರುವ ಅನುದಾನ ಎಷ್ಟು; (ಯೋಜನೆವಾರು ಅನುದಾನದ ವಿವರ ನೀಡುವುದು) | ಚಾಮರಾಜನಗರ ಕ್ಷೇತ್ರಕ್ಕೆ 2019-20 ರಿಂದ ಆಗಸ್ಟ್-2022 ರ ಅಂತ್ಯಕ್ಕೆ ಅನುಮೋದನೆಗೊಂಡ ವಿವಿಧ ವಸತಿ ಯೋಜನೆಗಳಡಿ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಗೆ ಅನುಗುಣವಾಗಿ ಫಲಾನುಭವಿಗಳಿಗೆ ರೂ.2624.37 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಯೋಜನೆವಾರು ಅನುದಾನದ ವಿವರ ಕೆಳಕಂಡಂತಿದೆ.<br><br>(ರೂ.ಲಕ್ಷಗಳಲ್ಲಿ)<br>ಯೋಜನೆ — ಮೊತ್ತ<br>ಬಸವ ವಸತಿ ಯೋಜನೆ — 921.29<br>ಡಾ. ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆ - ಗ್ರಾಮೀಣ — 757.58<br>ಡಾ. ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆ – ನಗರ — 83.85<br>ದೇವರಾಜು ಅರಸು ವಸತಿ ಯೋಜನೆ – — 26.27<br>ಪಿ.ಎಂ.ಎ.ವೈ-ಗ್ರಾಮೀಣ — 405.75<br>ಪಿ.ಎಂ.ಎ.ವೈ-ನಗರ — 361.12<br>ವಾಜಪಯಿ ನಗರ ವಸತಿ ಯೋಜನೆ — 68.51<br>ಒಟ್ಟು — 2624.37<br><br>ಭೌತಿಕ ಪ್ರಗತಿಗನುಗುಣವಾಗಿ ಆಧಾರ್ ಜೋಡಣೆಗೊಂಡ ಫಲಾನುಭವಿಗಳಿಗೆ ಅನುದಾನ ಬಿಡುಗಡೆಮಾಡಲು ಪ್ರಸ್ತುತ ಯಾವುದೂ ಬಾಕಿ ಇರುವುದಿಲ್ಲ. |
| ಇ) | ವಿವಿಧ ವಸತಿ ಯೋಜನೆಗಳಿಗೆ ಯಾವ | ರಾಜೀವ್ ಗಾಂಧಿ ವಸತಿ ನಿಗಮವು ಪ್ರತಿ ವಾರ ಅರ್ಹ |

| | | |
|---|---|---|
| | ಕಾರಣಕ್ಕೆ ಅನುದಾನ ತಡೆಹಿಡಿಯಲಾಗಿದೆ ; ತಡೆಹಿಡಿದಿರುವ ಅನುದಾನವನ್ನು ಯಾವ ಕಾಲಮಿತಿಯಲ್ಲಿ ಬಿಡುಗಡೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದು ; (ವಿವರ ನೀಡುವುದು) | ಫಲಾನುಭವಿಗಳ ಜಿಪಿಎಸ್ ಭೌತಿಕ ಪ್ರಗತಿಯನ್ನು ಆಧರಿಸಿ ಅನುದಾನವನ್ನು ನೇರವಾಗಿ ಫಲಾನುಭವಿಗಳ ಖಾತೆಗೆ ಬಿಡುಗಡೆ ಮಾಡುತ್ತಿದೆ. ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲು ಯಾವುದೇ ಬಾಕಿ ಇರುವುದಿಲ್ಲ. ಆದರೆ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಯನ್ನು ಪರಿಶೀಲಿಸುವಾಗ ಈ ಕೆಳಕಂಡ ಕಾರಣಗಳಿಂದ ಫಲಾನುಭವಿಗಳ ಅನುದಾನ ಬಿಡುಗಡೆಯನ್ನು ತಡೆಹಿಡಿಯಲಾಗಿದೆ:<br><br>**1.** ನಿಗದಿಪಡಿಸಿದ ಘಟಕ ವೆಚ್ಚ ಮೀರಿ ನಿರ್ಮಿಸಿದ ಮನೆ: ನಿಯಮಾನುಸಾರ ಸರ್ಕಾರವು ಪ್ರತಿ ಮನೆಗೆ ನೀಡುವ ಸಹಾಯಧನದ ಜೊತೆಗೆ ಫಲಾನುಭವಿಗಳ ಸ್ವಂತ ವಂತಿಕೆ ಹಣವನ್ನು ಉಪಯೋಗಿಸಿ ಕೊಂಡು ಗರಿಷ್ಟ 5 ಲಕ್ಷದವರೆಗೆ ಮನೆ ನಿರ್ಮಿಸಿಕೊಳ್ಳಲು ಅವಕಾಶ ನೀಡಿದೆ. ಆದರೆ ಕೆಲವು ಫಲಾನುಭವಿಗಳು ರೂ. 6.00 ರಿಂದ ರೂ.20.00 ಲಕ್ಷಕ್ಕೂ ಹೆಚ್ಚು ಅನುದಾನ ವಿನಿಯೋಗಿಸಿ ಮನೆ ನಿರ್ಮಿಸುತ್ತಿರುವ ಫಲಾನುಭವಿಗಳ ಅನುದಾನವನ್ನು ತಡೆಹಿಡಿಯಲಾಗಿದೆ.<br><br>**2.** ಮನೆ ವಿಸ್ತರಣೆ: ವಾಸಕ್ಕೆ ಈಗಾಗಲೇ ಸ್ವಂತ ಮನೆ ಹೊಂದಿರುವ ಫಲಾನುಭವಿಯು ತನ್ನ ಮನೆಯನ್ನು ವಿಸ್ತರಣೆ ಮಾಡಿಕೊಳ್ಳುತ್ತಿರುವ ಫಲಾನುಭವಿಗಳ ಅನುದಾನವನ್ನು ತಡೆಹಿಡಿಯಲಾಗಿದೆ.<br><br>**3.** ಹಳೇ ಮನೆ ಅಥವಾ ಹಂತವಾರು ಛಾಯಾ ಚಿತ್ರಗಳ ಅವಶ್ಯಕತೆ: ಸುಮಾರು ವರ್ಷದ ಹಿಂದೆ ನಿರ್ಮಿಸಿರುವ ಹಳೇ ಮನೆಗಳನ್ನು ಜಿಪಿಎಸ್‌ಗೆ ಅಳವಡಿಸಿರುವ ಕಾರಣ ಮತ್ತು ಮನೆ ನಿರ್ಮಾಣಕ್ಕೆ ಸಂಬಂಧಪಟ್ಟಂತೆ 4 ಹಂತದ ಜಿ.ಪಿ.ಎಸ್. ಛಾಯಾ ಚಿತ್ರಗಳನ್ನು ಅಳವಡಿಸದೆ, ಹಾಲಿ ಇರುವ ಮನೆ ಯನ್ನೇ ಜಿ.ಪಿ.ಎಸ್.ಗೆ ಅಳವಡಿಸಿರುವ ಕಾರಣ ಅಂತಹ ಫಲಾನುಭವಿಗಳ ಅನುದಾನವನ್ನು ತಡೆಹಿಡಿಯ ಲಾಗಿದೆ.<br><br>**4.** ವಸತಿಯೇತರ ಉದ್ದೇಶಕ್ಕಾಗಿ ನಿರ್ಮಿಸಿ ಕೊಂಡಿರುವುದು: ನಿರ್ಮಿಸುತ್ತಿರುವ ಮನೆಯನ್ನು ವಾಸೇತರ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಿರುವುದಾಗಿ ಕಂಡುಬಂದ ಫಲಾನುಭವಿಗಳ ಅನುದಾನವನ್ನು ತಡೆಹಿಡಿಯಲಾಗಿದೆ.<br><br>ಮೇಲೆ ತಿಳಿಸಿದ ಪ್ರಕರಣಗಳಲ್ಲಿ ಒಂದು ವೇಳೆ ವಾಸ್ತವಿಕವಾಗಿ ನಿರ್ಮಾಣ ಗೊಂಡಿರುವ ಮನೆಯು ಅರ್ಹವಿರುವುದು ಕಂಡುಬಂದಲ್ಲಿ, ಸ್ಥಳೀಯ ಸಂಸ್ಥೆ/ತಾಲ್ಲೂಕು ಮಟ್ಟದ ಅಧಿಕಾರಿಗಳ ದೃಢೀಕರಣದೊಂದಿಗೆ, ನಿಗದಿತ ನಮೂನೆಯಲ್ಲಿ ಪ್ರಸ್ತಾವನೆಯನ್ನು ಜಿಲ್ಲಾಡಳಿತವು ಆನ್‌ಲೈನ್ ಮೂಲಕ ನಿಗಮಕ್ಕೆ ಸಲ್ಲಿಸಿದಲ್ಲಿ, ಪರಿಶೀಲಿಸಿ, ಅರ್ಹರಿದ್ದಲ್ಲಿ ಅನುದಾನ ಬಿಡುಗಡೆಗೊಳಿಸಲು ಕ್ರಮ ವಹಿಸಲಾಗುತ್ತಿದೆ. |
| ಈ) | ಸದರಿ ಯೋಜನೆಗಳ ಸೌಲಭ್ಯವನ್ನು ಪಡೆಯಲು | ವಿವಿಧ ವಸತಿ ಯೋಜನೆಗಳಡಿ ವಸತಿ ಸೌಲಭ್ಯವನ್ನು ಪಡೆಯಲು ನಿಗಧಿಪಡಿಸಿರುವ ಮಾನದಂಡಗಳು ಕೆಳಕಂಡಂತಿದೆ. |

| | | |
|---|---|---|
| | ಇರುವ ಮಾನದಂಡಗಳೇನು ? (ಎಲ್ಲಾ ಯೋಜನಾವಾರು ಸಂಪೂರ್ಣ ವಿವರ ನೀಡುವುದು) | • ಅರ್ಜಿದಾರರು ಕಡ್ಡಾಯವಾಗಿ ಮಹಿಳೆಯಾಗಿರಬೇಕು (ವಿವಾಹಿತ ಅಥವಾ ಏಕ ಮಹಿಳಾ ಒಡೆತನದ ಗೃಹಿಣಿ). ಮಾಜಿ ಯೋಧರು, ವಿಧುರರು, ಅಂಗವಿಕಲರು ಮತ್ತು ಹಿರಿಯ ನಾಗರೀಕರಾಗಿದ್ದಲ್ಲಿ ಪುರುಷರು ಸಹಾ ಅರ್ಹರಾಗಿರುತ್ತಾರೆ.<br>• ಅರ್ಜಿದಾರರ ಕುಂಟುಂಬವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಗ್ರಾಮೀಣ ಪ್ರದೇಶದವರಾಗಿದ್ದಲ್ಲಿ ರೂ.1,20,000/- ಕ್ಕಿಂತ ಕಡಿಮೆ ಇರಬೇಕು ನಗರ ಪ್ರದೇಶದಲ್ಲಿ ರೂ. 2 ಲಕ್ಷಕ್ಕೆ ಒಳಗಿರಬೇಕು.<br>• ಅರ್ಜಿದಾರರ ಕುಟುಂಬವು ವಸತಿ ರಹಿತರಾಗಿದ್ದು, ಅರ್ಜಿದಾರರು ಅಥವಾ ಕುಟುಂಬದ ಯಾವುದೇ ಸದ್ಯಸರ ಹೆಸರಿನಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಸ್ವಂತ ಮನೆಯನ್ನು ಹೊಂದಿರಬಾರದು. ಶಿಥಿಲಗೊಂಡ ಮನೆ ಅಥವಾ ಗುಡಿಸಲಿನಲ್ಲಿ ವಾಸಿಸುತ್ತಿರುವವರು ಅರ್ಹರಾಗಿರುತ್ತಾರೆ.<br>• ಅರ್ಜಿದಾರರು ಸ್ವಂತ ನಿವೇಶನ ಹೊಂದಿದ್ದು ನಿವೇಶನಕ್ಕೆ ಸಂಬಂಧಿಸಿದಂತೆ ಖಾತೆ ಹೊಂದಿರಬೇಕು (ಪಾರಂಪರಿಕ ಅರಣ್ಯ ಹಕ್ಕುಗಳ ಕಾಯ್ದೆಯನ್ವಯ ಜಿಲ್ಲಾ ಸಮಿತಿಯಿಂದ ನೀಡಲಾದ ಹಕ್ಕುಪತ್ರ ಪಡೆದಿದ್ದಲ್ಲಿ ವಸತಿ ಸೌಕರ್ಯ. ಪಡೆಯಲು ಪರಿಗಣಿಸಬಹುದಾಗಿದೆ.)<br>• ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.<br>• ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾ)ಯಡಿ ವಸತಿ ಸೌಲಭ್ಯ ಪಡೆಯಲು 2018ರ ವಸತಿ/ನಿವೇಶನ ರಹಿತರ ಪಟ್ಟಿಯಲ್ಲಿ ಹೆಸರು ಸೇರಿರಬೇಕು.<br><br>ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) ಯಡಿ ಫಲಾನುಭವಿಗಳನ್ನು ಗುರುತಿಸಲು/ಆಯ್ಕೆ ಮಾಡುವ ಮಾನದಂಡ ಈ ಕೆಳಗಿನಂತಿವೆ.<br><br>• ದೇಶದಾದ್ಯಂತ ಅವನ/ಅವಳ ಹೆಸರಿನಲ್ಲಿ ಯಾವುದೇ ಮನೆ ಇರಬಾರದು.<br>• ವಾರ್ಷಿಕ ಆದಾಯ 3 ಲಕ್ಷಕ್ಕಿಂತ ಕಡಿಮೆ ಇರಬೇಕು.<br>• ಇತರೇ ವಸತಿ ಯೋಜನೆಗಳಲ್ಲಿ ಈಗಾಗಲೇ ಸಹಾಯಧನ ಪಡೆದಿರಬಾರದು. |

ಸಂಖ್ಯೆ :ವಇ 349 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು

# ಚಾಮರಾಜನಗರ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಂದ ಮಂಜೂರು

| District | Taluk | GP | Village | Approved |
|---|---|---|---|---|
| Chamarajanagar | Chamarajanagar | Alur | Alur | 10 |
| Chamarajanagar | Chamarajanagar | Alur | Alur | 2 |
| Chamarajanagar | Chamarajanagar | Alur | Alur | 17 |
| Chamarajanagar | Chamarajanagar | Alur | Basappanapalya | 3 |
| Chamarajanagar | Chamarajanagar | Alur | Huralinanjanapura | 2 |
| Chamarajanagar | Chamarajanagar | Alur | Huralinanjanapura | 1 |
| Chamarajanagar | Chamarajanagar | Alur | Kariyana Katte | 5 |
| Chamarajanagar | Chamarajanagar | Alur | Kariyana Katte | 1 |
| Chamarajanagar | Chamarajanagar | Alur | Mallupura | 2 |
| Chamarajanagar | Chamarajanagar | Alur | Mallupura | 2 |
| Chamarajanagar | Chamarajanagar | Alur | Saraguru | 5 |
| Chamarajanagar | Chamarajanagar | Alur | Saraguru | 2 |
| Chamarajanagar | Chamarajanagar | Alur | Saraguru | 1 |
| Chamarajanagar | Chamarajanagar | Alur | Saraguru mole | 2 |
| Chamarajanagar | Chamarajanagar | Alur | Saraguru mole | 1 |
| | | Alur Total | | 56 |
| Chamarajanagar | Chamarajanagar | Amachavadi | Amachavadi | 25 |
| Chamarajanagar | Chamarajanagar | Amachavadi | Amachavadi | 7 |
| Chamarajanagar | Chamarajanagar | Amachavadi | Lakshmipura | 1 |
| Chamarajanagar | Chamarajanagar | Amachavadi | Mahadeswara Colony | 1 |
| Chamarajanagar | Chamarajanagar | Amachavadi | Siddalingapura | 2 |
| | | Amachavadi Total | | 36 |
| Chamarajanagar | Chamarajanagar | Arakalavadi | Arakalavadi | 7 |
| Chamarajanagar | Chamarajanagar | Arakalavadi | Arakalavadi | 2 |
| Chamarajanagar | Chamarajanagar | Arakalavadi | Arakalavadi | 1 |
| Chamarajanagar | Chamarajanagar | Arakalavadi | Linganapura | 5 |
| Chamarajanagar | Chamarajanagar | Arakalavadi | Manchagundipura | 2 |
| Chamarajanagar | Chamarajanagar | Arakalavadi | Manchagundipura | 1 |
| Chamarajanagar | Chamarajanagar | Arakalavadi | Manchagundipura | 3 |
| Chamarajanagar | Chamarajanagar | Arakalavadi | Mudala Hosahalli | 5 |
| Chamarajanagar | Chamarajanagar | Arakalavadi | Mudala Hosahalli | 2 |
| Chamarajanagar | Chamarajanagar | Arakalavadi | Mudala Hosahalli | 5 |
| Chamarajanagar | Chamarajanagar | Arakalavadi | Yanagahalli | 7 |
| Chamarajanagar | Chamarajanagar | Arakalavadi | Yanagahalli | 5 |
| | | Arakalavadi Total | | 45 |
| Chamarajanagar | Chamarajanagar | Attugulipura | Attagulipura | 14 |
| Chamarajanagar | Chamarajanagar | Attugulipura | Chikaholle | 3 |
| Chamarajanagar | Chamarajanagar | Attugulipura | Chikaholle | 1 |
| Chamarajanagar | Chamarajanagar | Attugulipura | HaradanahalliDistrictForestli | 1 |
| Chamarajanagar | Chamarajanagar | Attugulipura | Hongalavadi | 1 |
| Chamarajanagar | Chamarajanagar | Attugulipura | Hongalavadi | 1 |
| Chamarajanagar | Chamarajanagar | Attugulipura | Kallikamba Colony | 1 |
| Chamarajanagar | Chamarajanagar | Attugulipura | Kulluru | 10 |
| Chamarajanagar | Chamarajanagar | Attugulipura | Kulluru | 3 |
| Chamarajanagar | Chamarajanagar | Attugulipura | Kulluru | 3 |
| Chamarajanagar | Chamarajanagar | Attugulipura | Kumbeswara Colony | 1 |
| Chamarajanagar | Chamarajanagar | Attugulipura | Kumbeswara Colony | 1 |
| Chamarajanagar | Chamarajanagar | Attugulipura | Siddaiahnapura | 4 |
| | | Attugulipura Total | | 44 |
| Chamarajanagar | Chamarajanagar | Badanaguppe | Badanaguppe | 8 |
| Chamarajanagar | Chamarajanagar | Badanaguppe | Badanaguppe | 4 |
| Chamarajanagar | Chamarajanagar | Badanaguppe | Badanaguppe | 13 |
| Chamarajanagar | Chamarajanagar | Badanaguppe | Bedarapura | 6 |
| Chamarajanagar | Chamarajanagar | Badanaguppe | Bedarapura | 3 |
| Chamarajanagar | Chamarajanagar | Badanaguppe | Mariyala | 7 |
| Chamarajanagar | Chamarajanagar | Badanaguppe | Mariyala | 2 |
| Chamarajanagar | Chamarajanagar | Badanaguppe | Mariyalada Hundi | 3 |
| Chamarajanagar | Chamarajanagar | Badanaguppe | Mariyalada Hundi | 1 |

Annexure-1

# ಚಾಮರಾಜನಗರ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಳಿಂದ ಮಂಜೂರು

| District | Taluk | GP | Village | Approved |
|---|---|---|---|---|
| Chamarajanagar | Chamarajanagar | Badanaguppe | Melajipura | 3 |
| | | Badanaguppe Total | | 50 |
| Chamarajanagar | Chamarajanagar | Bisalavadi | B.G.Kaloni | 1 |
| Chamarajanagar | Chamarajanagar | Bisalavadi | Bandigowdanahalli | 7 |
| Chamarajanagar | Chamarajanagar | Bisalavadi | Bandigowdanahalli | 4 |
| Chamarajanagar | Chamarajanagar | Bisalavadi | Basthipura | 1 |
| Chamarajanagar | Chamarajanagar | Bisalavadi | Bevinathalapura | 2 |
| Chamarajanagar | Chamarajanagar | Bisalavadi | Bevinathalapura | 1 |
| Chamarajanagar | Chamarajanagar | Bisalavadi | Bisalavadi | 14 |
| Chamarajanagar | Chamarajanagar | Bisalavadi | Bisalavadi | 5 |
| Chamarajanagar | Chamarajanagar | Bisalavadi | Bisalavadi | 9 |
| Chamarajanagar | Chamarajanagar | Bisalavadi | Kodlugane | 2 |
| Chamarajanagar | Chamarajanagar | Bisalavadi | Kodiugane | 1 |
| | | Bisalavadi Total | | 47 |
| Chamarajanagar | Chamarajanagar | Bogapura | Bhogapura | 5 |
| Chamarajanagar | Chamarajanagar | Bogapura | Bhogapura | 2 |
| Chamarajanagar | Chamarajanagar | Bogapura | Bhogapura | 1 |
| Chamarajanagar | Chamarajanagar | Bogapura | Hanahalli | 1 |
| Chamarajanagar | Chamarajanagar | Bogapura | K.Basavanapura | 4 |
| Chamarajanagar | Chamarajanagar | Bogapura | Kallahalli | 2 |
| Chamarajanagar | Chamarajanagar | Bogapura | Kellamballi | 5 |
| Chamarajanagar | Chamarajanagar | Bogapura | Kellamballi | 2 |
| Chamarajanagar | Chamarajanagar | Bogapura | Sappaiahnapura | 1 |
| | | Bogapura Total | | 23 |
| Chamarajanagar | Chamarajanagar | Chandakavadi | Basavanapura | 2 |
| Chamarajanagar | Chamarajanagar | Chandakavadi | Basavanapura | 2 |
| Chamarajanagar | Chamarajanagar | Chandakavadi | Chandakavadi | 15 |
| Chamarajanagar | Chamarajanagar | Chandakavadi | Chandakavadi | 6 |
| Chamarajanagar | Chamarajanagar | Chandakavadi | Chandakavadi | 4 |
| Chamarajanagar | Chamarajanagar | Chandakavadi | Hanchithalapura | 2 |
| Chamarajanagar | Chamarajanagar | Chandakavadi | Hanchithalapura | 1 |
| Chamarajanagar | Chamarajanagar | Chandakavadi | Kodimole | 11 |
| Chamarajanagar | Chamarajanagar | Chandakavadi | Kodimole | 1 |
| Chamarajanagar | Chamarajanagar | Chandakavadi | Kodimole | 47 |
| | | Chandakavadi Total | | 91 |
| Chamarajanagar | Chamarajanagar | Doddamole | Byadamudlu | 9 |
| Chamarajanagar | Chamarajanagar | Doddamole | Byadamudlu | 1 |
| Chamarajanagar | Chamarajanagar | Doddamole | Byadamudlu | 12 |
| Chamarajanagar | Chamarajanagar | Doddamole | Doddamole | 13 |
| Chamarajanagar | Chamarajanagar | Doddamole | Doddamole | 13 |
| Chamarajanagar | Chamarajanagar | Doddamole | Dollipura | 3 |
| Chamarajanagar | Chamarajanagar | Doddamole | Dollipura | 2 |
| | | Doddamole Total | | 53 |
| Chamarajanagar | Chamarajanagar | Haradhanahalli | Bandigere | 11 |
| Chamarajanagar | Chamarajanagar | Haradhanahalli | Bandigere | 5 |
| Chamarajanagar | Chamarajanagar | Haradhanahalli | Chandukatte Mole | 3 |
| Chamarajanagar | Chamarajanagar | Haradhanahalli | Haradanahalli | 10 |
| Chamarajanagar | Chamarajanagar | Haradhanahalli | Haradanahalli | 2 |
| Chamarajanagar | Chamarajanagar | Haradhanahalli | Haradanahalli | 1 |
| Chamarajanagar | Chamarajanagar | Haradhanahalli | Thavarekatte Mole | 3 |
| | | Haradhanahalli Total | | 35 |
| Chamarajanagar | Chamarajanagar | Hebbasur | Aralipura | 6 |
| Chamarajanagar | Chamarajanagar | Hebbasur | Aralipura | 1 |
| Chamarajanagar | Chamarajanagar | Hebbasur | Ayyanapura | 4 |
| Chamarajanagar | Chamarajanagar | Hebbasur | Dadadhahalli | 7 |
| Chamarajanagar | Chamarajanagar | Hebbasur | Dadadhahalli | 2 |
| Chamarajanagar | Chamarajanagar | Hebbasur | Devarajapura | 1 |

ಚಾಮರಾಜನಗರ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ಮಂಜೂರು

| District | Taluk | GP | Village | Approved |
|---|---|---|---|---|
| Chamarajanagar | Chamarajanagar | Hebbasur | Hebbasur | 11 |
| Chamarajanagar | Chamarajanagar | Hebbasur | Hebbasur | 3 |
| Chamarajanagar | Chamarajanagar | Hebbasur | Hitthalaguddha | 1 |
| Chamarajanagar | Chamarajanagar | Hebbasur | Mahadeshwara Calony | 1 |
| Chamarajanagar | Chamarajanagar | Hebbasur | Malledevanahalli | 1 |
| | | Hebbasur Total | | 38 |
| Chamarajanagar | Chamarajanagar | Heggotara | B.Malaihnapura | 3 |
| Chamarajanagar | Chamarajanagar | Heggotara | Bendaravady | 2 |
| Chamarajanagar | Chamarajanagar | Heggotara | Bendaravady | 3 |
| Chamarajanagar | Chamarajanagar | Heggotara | Bendaravady | 7 |
| Chamarajanagar | Chamarajanagar | Heggotara | Heggotara | 9 |
| Chamarajanagar | Chamarajanagar | Heggotara | Heggotara | 4 |
| Chamarajanagar | Chamarajanagar | Heggotara | Heggotara | 13 |
| Chamarajanagar | Chamarajanagar | Heggotara | Megala Hundi | 7 |
| Chamarajanagar | Chamarajanagar | Heggotara | Megala Hundi | 3 |
| Chamarajanagar | Chamarajanagar | Heggotara | Muthige | 2 |
| Chamarajanagar | Chamarajanagar | Heggotara | Muthige | 1 |
| Chamarajanagar | Chamarajanagar | Heggotara | Panyada Hundi | 3 |
| Chamarajanagar | Chamarajanagar | Heggotara | Panyada Hundi | 1 |
| | | Heggotara Total | | 58 |
| Chamarajanagar | Chamarajanagar | Honnalli | Bokkepura | 2 |
| Chamarajanagar | Chamarajanagar | Honnalli | Channappanapura | 4 |
| Chamarajanagar | Chamarajanagar | Honnalli | Channappanapura | 2 |
| Chamarajanagar | Chamarajanagar | Honnalli | Honnahalli | 3 |
| Chamarajanagar | Chamarajanagar | Honnalli | Honnahalli | 11 |
| Chamarajanagar | Chamarajanagar | Honnalli | Narasamangala | 2 |
| Chamarajanagar | Chamarajanagar | Honnalli | Nijalinganapura | 2 |
| Chamarajanagar | Chamarajanagar | Honnalli | Vaddagalapura | 2 |
| Chamarajanagar | Chamarajanagar | Honnalli | Vaddagalapura | 3 |
| Chamarajanagar | Chamarajanagar | Honnalli | Vaddagalapura | 5 |
| Chamarajanagar | Chamarajanagar | Honnalli | Vadgalapura Hundi | 4 |
| Chamarajanagar | Chamarajanagar | Honnalli | Vadgalapura Hundi | 1 |
| | | Honnalli Total | | 41 |
| Chamarajanagar | Chamarajanagar | Jyothigowdanapura | Hondarabalu | 1 |
| Chamarajanagar | Chamarajanagar | Jyothigowdanapura | Jyothigowdanapura | 5 |
| Chamarajanagar | Chamarajanagar | Jyothigowdanapura | Jyothigowdanapura | 4 |
| Chamarajanagar | Chamarajanagar | Jyothigowdanapura | Karalamole | 4 |
| Chamarajanagar | Chamarajanagar | Jyothigowdanapura | Kurubarahundi | 2 |
| Chamarajanagar | Chamarajanagar | Jyothigowdanapura | Nallur | 3 |
| Chamarajanagar | Chamarajanagar | Jyothigowdanapura | Nallur | 4 |
| Chamarajanagar | Chamarajanagar | Jyothigowdanapura | Nalluru Mole | 8 |
| | | Jyothigowdanapura Total | | 31 |
| Chamarajanagar | Chamarajanagar | Kagalavadi | Ammanapura | 3 |
| Chamarajanagar | Chamarajanagar | Kagalavadi | Ammanapura | 4 |
| Chamarajanagar | Chamarajanagar | Kagalavadi | Ammanapura | 9 |
| Chamarajanagar | Chamarajanagar | Kagalavadi | Kagalavadi | 14 |
| Chamarajanagar | Chamarajanagar | Kagalavadi | Kagalavadi | 3 |
| Chamarajanagar | Chamarajanagar | Kagalavadi | Kagalavadi Mole | 6 |
| | | Kagalavadi Total | | 39 |
| Chamarajanagar | Chamarajanagar | Kothalavadi | Devalapura | 4 |
| Chamarajanagar | Chamarajanagar | Kothalavadi | Katnavadi | 4 |
| Chamarajanagar | Chamarajanagar | Kothalavadi | Katnavadi | 1 |
| Chamarajanagar | Chamarajanagar | Kothalavadi | Kothalavadi | 14 |
| Chamarajanagar | Chamarajanagar | Kothalavadi | Kothalavadi | 1 |
| Chamarajanagar | Chamarajanagar | Kothalavadi | Kothalavadi | 13 |
| Chamarajanagar | Chamarajanagar | Kothalavadi | Sanegala | 1 |
| Chamarajanagar | Chamarajanagar | Kothalavadi | Sanegala | 1 |

ಚಾಮರಾಜನಗರ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ಮಂಜೂರು

| District | Taluk | GP | Village | Approved |
|---|---|---|---|---|
| Chamarajanagar | Chamarajanagar | Kothalavadi | Uganedahundi | 6 |
| Chamarajanagar | Chamarajanagar | Kothalavadi | Uganedahundi | 2 |
| | | Kothalavadi Total | | 47 |
| Chamarajanagar | Chamarajanagar | Kudluru | Boodithittu | 2 |
| Chamarajanagar | Chamarajanagar | Kudluru | Boodithittu | 1 |
| Chamarajanagar | Chamarajanagar | Kudluru | Boodithittu | 11 |
| Chamarajanagar | Chamarajanagar | Kudluru | Doddarayapete | 6 |
| Chamarajanagar | Chamarajanagar | Kudluru | Doddarayapete | 4 |
| Chamarajanagar | Chamarajanagar | Kudluru | Doddarayapete | 3 |
| Chamarajanagar | Chamarajanagar | Kudluru | Jalahallihundi Hosa Badavane | 2 |
| Chamarajanagar | Chamarajanagar | Kudluru | Kudalur | 11 |
| Chamarajanagar | Chamarajanagar | Kudluru | Kudalur | 2 |
| Chamarajanagar | Chamarajanagar | Kudluru | Kudalur | 14 |
| Chamarajanagar | Chamarajanagar | Kudluru | Modalamole | 3 |
| Chamarajanagar | Chamarajanagar | Kudluru | Modalamole | 8 |
| | | Kudluru Total | | 67 |
| Chamarajanagar | Chamarajanagar | Madapura | Handarakalli | 4 |
| Chamarajanagar | Chamarajanagar | Madapura | Handarakalli | 2 |
| Chamarajanagar | Chamarajanagar | Madapura | Handrakalli Mole | 6 |
| Chamarajanagar | Chamarajanagar | Madapura | Handrakalli Mole | 19 |
| Chamarajanagar | Chamarajanagar | Madapura | Kadahalli | 4 |
| Chamarajanagar | Chamarajanagar | Madapura | Kadahalli | 2 |
| Chamarajanagar | Chamarajanagar | Madapura | Kiragasur | 3 |
| Chamarajanagar | Chamarajanagar | Madapura | Kiragasur | 1 |
| Chamarajanagar | Chamarajanagar | Madapura | Madapura | 8 |
| Chamarajanagar | Chamarajanagar | Madapura | Madapura | 2 |
| Chamarajanagar | Chamarajanagar | Madapura | Masagapura | 3 |
| Chamarajanagar | Chamarajanagar | Madapura | Masagapura | 23 |
| | | Madapura Total | | 77 |
| Chamarajanagar | Chamarajanagar | Mangala | Hullepura | 1 |
| Chamarajanagar | Chamarajanagar | Mangala | Karadimole | 3 |
| Chamarajanagar | Chamarajanagar | Mangala | Mahanthalapura | 2 |
| Chamarajanagar | Chamarajanagar | Mangala | Mahanthalapura | 1 |
| Chamarajanagar | Chamarajanagar | Mangala | Mangala | 13 |
| Chamarajanagar | Chamarajanagar | Mangala | Mangala | 2 |
| Chamarajanagar | Chamarajanagar | Mangala | Mangala | 35 |
| Chamarajanagar | Chamarajanagar | Mangala | Mangalada Hosuru | 2 |
| Chamarajanagar | Chamarajanagar | Mangala | Mangalada Hosuru | 2 |
| Chamarajanagar | Chamarajanagar | Mangala | Yadiyuru | 1 |
| Chamarajanagar | Chamarajanagar | Mangala | Yadiyuru | 1 |
| | | Mangala Total | | 63 |
| Chamarajanagar | Chamarajanagar | Nagavalli | Kokkanahalli | 5 |
| Chamarajanagar | Chamarajanagar | Nagavalli | Kokkanahalli | 1 |
| Chamarajanagar | Chamarajanagar | Nagavalli | Nagavalli | 18 |
| Chamarajanagar | Chamarajanagar | Nagavalli | Nagavalli | 10 |
| Chamarajanagar | Chamarajanagar | Nagavalli | Nagavalli | 15 |
| Chamarajanagar | Chamarajanagar | Nagavalli | Puttanapura | 4 |
| Chamarajanagar | Chamarajanagar | Nagavalli | Puttanapura | 1 |
| | | Nagavalli Total | | 54 |
| Chamarajanagar | Chamarajanagar | Nanjedevanapura | Kalanahundi | 7 |
| Chamarajanagar | Chamarajanagar | Nanjedevanapura | Kalanahundi | 2 |
| Chamarajanagar | Chamarajanagar | Nanjedevanapura | Kalanahundi | 18 |
| Chamarajanagar | Chamarajanagar | Nanjedevanapura | Nanjedevanapura | 6 |
| Chamarajanagar | Chamarajanagar | Nanjedevanapura | Nanjedevanapura | 2 |
| Chamarajanagar | Chamarajanagar | Nanjedevanapura | Thammadahalli | 9 |
| Chamarajanagar | Chamarajanagar | Nanjedevanapura | Thammadahalli | 5 |
| Chamarajanagar | Chamarajanagar | Nanjedevanapura | Thammadahalli | 2 |
| Chamarajanagar | Chamarajanagar | Nanjedevanapura | Veeranapura | 4 |

ಚಾಮರಾಜನಗರ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ಮಂಜೂರು

| District | Taluk | GP | Village | Approved |
|---|---|---|---|---|
| | | Nanjedevanapura Total | | 55 |
| Chamarajanagar | Chamarajanagar | Punajanuru | Bedaguli | 1 |
| Chamarajanagar | Chamarajanagar | Punajanuru | Doddamoodahalli | 2 |
| Chamarajanagar | Chamarajanagar | Punajanuru | Doddamoodahalli | 1 |
| Chamarajanagar | Chamarajanagar | Punajanuru | Honnegowdanahalli | 1 |
| Chamarajanagar | Chamarajanagar | Punajanuru | Kaneera Coloni | 1 |
| Chamarajanagar | Chamarajanagar | Punajanuru | Kolipalya | 7 |
| Chamarajanagar | Chamarajanagar | Punajanuru | Kolipalya | 2 |
| Chamarajanagar | Chamarajanagar | Punajanuru | Mukanapalya | 1 |
| Chamarajanagar | Chamarajanagar | Punajanuru | Punajanuru | 15 |
| Chamarajanagar | Chamarajanagar | Punajanuru | Punajanuru | 1 |
| Chamarajanagar | Chamarajanagar | Punajanuru | Punajanuru | 8 |
| Chamarajanagar | Chamarajanagar | Punajanuru | Punajanuru Gate | 2 |
| Chamarajanagar | Chamarajanagar | Punajanuru | Punajur State Forest | 1 |
| Chamarajanagar | Chamarajanagar | Punajanuru | Rangasandra | 1 |
| Chamarajanagar | Chamarajanagar | Punajanuru | Rangasandra | 1 |
| Chamarajanagar | Chamarajanagar | Punajanuru | Veeraiahna Pura | 1 |
| Chamarajanagar | Chamarajanagar | Punajanuru | Veeraiahna Pura | 1 |
| | | Punajanuru Total | | 47 |
| Chamarajanagar | Chamarajanagar | Shivapura | K.K.Hundi | 3 |
| Chamarajanagar | Chamarajanagar | Shivapura | Mallaiahnapura | 10 |
| Chamarajanagar | Chamarajanagar | Shivapura | Mallaiahnapura | 2 |
| Chamarajanagar | Chamarajanagar | Shivapura | Shivapura | 11 |
| Chamarajanagar | Chamarajanagar | Shivapura | Shivapura | 2 |
| Chamarajanagar | Chamarajanagar | Shivapura | Uthavalli | 5 |
| Chamarajanagar | Chamarajanagar | Shivapura | Uthavalli | 3 |
| Chamarajanagar | Chamarajanagar | Shivapura | Yadapura | 1 |
| | | Shivapura Total | | 37 |
| Chamarajanagar | Chamarajanagar | Udigala | Badagalapura | 4 |
| Chamarajanagar | Chamarajanagar | Udigala | Badagalapura | 1 |
| Chamarajanagar | Chamarajanagar | Udigala | Chikempi Hundi | 1 |
| Chamarajanagar | Chamarajanagar | Udigala | Chikempi Hundi | 1 |
| Chamarajanagar | Chamarajanagar | Udigala | Udigala | 18 |
| Chamarajanagar | Chamarajanagar | Udigala | Udigala | 8 |
| | | Udigala Total | | 33 |
| Chamarajanagar | Chamarajanagar | Venkataiana Chatra | Ankanasettypura | 6 |
| Chamarajanagar | Chamarajanagar | Venkataiana Chatra | Ankanasettypura | 1 |
| Chamarajanagar | Chamarajanagar | Venkataiana Chatra | Basavapura | 3 |
| Chamarajanagar | Chamarajanagar | Venkataiana Chatra | Basavapura | 6 |
| Chamarajanagar | Chamarajanagar | Venkataiana Chatra | Basavapura | 10 |
| Chamarajanagar | Chamarajanagar | Venkataiana Chatra | Chikkamole | 2 |
| Chamarajanagar | Chamarajanagar | Venkataiana Chatra | V.C Hosur | 5 |
| Chamarajanagar | Chamarajanagar | Venkataiana Chatra | Venkataiahna Chatra | 9 |
| Chamarajanagar | Chamarajanagar | Venkataiana Chatra | Venkataiahna Chatra | 2 |
| Chamarajanagar | Chamarajanagar | Venkataiana Chatra | Venkataiahna Chatra | 9 |
| | | Venkataiana Chatra Total | | 53 |
| Chamarajanagar | Chamarajanagar | Yaraganahalli | Achattipura | 3 |
| Chamarajanagar | Chamarajanagar | Yaraganahalli | Kilagere | 5 |
| Chamarajanagar | Chamarajanagar | Yaraganahalli | Kilagere | 4 |
| Chamarajanagar | Chamarajanagar | Yaraganahalli | Kilagere | 4 |
| Chamarajanagar | Chamarajanagar | Yaraganahalli | Madalavadi | 6 |
| Chamarajanagar | Chamarajanagar | Yaraganahalli | Madalavadi | 1 |
| Chamarajanagar | Chamarajanagar | Yaraganahalli | Madalavadi | 1 |
| Chamarajanagar | Chamarajanagar | Yaraganahalli | Vaddarahalli | 4 |
| Chamarajanagar | Chamarajanagar | Yaraganahalli | Vaddarahalli | 3 |
| Chamarajanagar | Chamarajanagar | Yaraganahalli | Yanagumba | 4 |

Annexure-1

# ಚಾಮರಾಜನಗರ ವಿಧಾನ ಸಭಾ ಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಿಂದ ಮಂಜೂರು

| District | Taluk | GP | Village | Approved |
|---|---|---|---|---|
| Chamarajanagar | Chamarajanagar | Yaraganahalli | Yanagumba | 1 |
| Chamarajanagar | Chamarajanagar | Yaraganahalli | Yanagumba | 13 |
| Chamarajanagar | Chamarajanagar | Yaraganahalli | Yaraganhalli | 7 |
| Chamarajanagar | Chamarajanagar | Yaraganahalli | Yaraganhalli | 1 |
| Chamarajanagar | Chamarajanagar | Yaraganahalli | Yaraganhalli | 2 |
| | | **Yaraganahalli Total** | | 59 |
| | | **Grand Total** | | 1279 |

Click here for Annexures

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 38 |
| ಸದಸ್ಯರ ಹೆಸರು | ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ) |
| ಉತ್ತರಿಸಬೇಕಾದ ದಿನಾಂಕ | 12.09.2022 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಹೊಸದಾಗಿ ಸೃಜಿಸಲಾದ ತಾಲ್ಲೂಕುಗಳೆಷ್ಟು; ಅವು ಯಾವುವು; (ಆದೇಶದ ಪ್ರತಿವಾರು ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಹೊಸದಾಗಿ 14 ಹೊಸ ತಾಲ್ಲೂಕುಗಳನ್ನು ರಚಿಸಲು ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಕೆಳಕಂಡ 12 ತಾಲ್ಲೂಕುಗಳಿಗೆ ಅಂತಿಮ ಅಧಿಸೂಚನೆ ಹೊರಡಿಸಿದ್ದು, ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಿವೆ.<br>1.ಹಾರೋಹಳ್ಳಿ 2. ಚೇಳೂರು 3. ಕಳಸಾ<br>4. ಪೊನ್ನಂಪೇಟೆ 5. ಕುಶಾಲನಗರ<br>6. ಅಲಮೇಲ 7. ಮುಲ್ಕಿ 8. ಉಲ್ಲಾಳ<br>9 .ಸಾಲಿಗ್ರಾಮ 10. ಯರಗಟ್ಟಿ<br>11. ಮಂಚೇನಹಳ್ಳಿ 12.ಅರಕೇರಾ<br>ಇನ್ನುಳಿದಂತೆ ತೇರದಾಳ ನೂತನ ತಾಲ್ಲೂಕಿನ ಪ್ರಾಥಮಿಕ ಅಧಿಸೂಚನೆ ಹೊರಡಿಸಿದ್ದು, ನಿಗಧಿತ ಅವಧಿಯಲ್ಲಿ ಸ್ವೀಕೃತವಾಗುವ ಸಲಹೆ/ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗುವುದು. ಶಾಂತಿಗ್ರಾಮ ನೂತನ ತಾಲ್ಲೂಕಿಗೆ ಗ್ರಾಮಗಳನ್ನು ಸೇರ್ಪಡೆ ಮಾಡಿ ಅಧಿಸೂಚನೆ ಹೊರಡಿಸಬೇಕಾಗಿದ್ದು, ಜಿಲ್ಲಾಧಿಕಾರಿ, ಹಾಸನ ಜಿಲ್ಲೆ ಇವರಿಂದ ವರದಿ ನಿರೀಕ್ಷಿಸಲಾಗಿದೆ. ಆದೇಶದ ಪ್ರತಿಗಳನ್ನು ಮಾಹಿತಿಗಾಗಿ ಇರಿಸಿದೆ. |
| ಆ) | ಇವುಗಳ ಪೈಕಿ ಎಷ್ಟು ತಾಲ್ಲೂಕುಗಳಲ್ಲಿ ಕಛೇರಿಯ ಸ್ವಂತ ಕಟ್ಟಡವಿರುತ್ತದೆ; ಸ್ವಂತ ಕಟ್ಟಡವಿಲ್ಲದ ತಾಲ್ಲೂಕುಗಳಲ್ಲಿ ಯಾವ ಕಾಲಮಿತಿಯೊಳಗೆ ಸ್ವಂತ ಕಟ್ಟಡ ನಿರ್ಮಿಸಲಾಗುವುದು; (ವಿವರ ನೀಡುವುದು) | ನೂತನ ತಾಲ್ಲೂಕುಗಳ ಪೈಕಿ ಮೂಲ್ಕಿ ತಾಲ್ಲೂಕಿನಲ್ಲಿ 'ತಾಲ್ಲೂಕು ಆಡಳಿತ ಸೌಧ' ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಸಾಲಿಗ್ರಾಮ ತಾಲ್ಲೂಕಿನಲ್ಲಿ ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆಯಲ್ಲಿದೆ.<br>ಉಳಿದ ತಾಲ್ಲೂಕುಗಳಲ್ಲಿ, 'ತಾಲ್ಲೂಕು ಆಡಳಿತ ಸೌಧ ನಿರ್ಮಿಸಲು' ಜಮೀನು ಗುರುತಿಸಿ, ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ. |

| | | |
|---|---|---|
| ಇ) | ರಾಜ್ಯದಲ್ಲಿ ಎಷ್ಟು ಜನರಿಗೆ ಸಾಮಾಜಿಕ ಭದ್ರತಾ ಯೋಜನೆಗಳಡಿಯಲ್ಲಿ ಯಾವ ಯಾವ ಯೋಜನೆಗಳು ಮಂಜೂರು ಮಾಡಲಾಗಿದೆ; (ಎಲ್ಲಾ ಯೋಜನೆಯ ಯೋಜನಾವಾರು ಆದೇಶದ ಪ್ರತಿವಾರು ವಿವರ ನೀಡುವುದು) | ಸಾಮಾಜಿಕ ಭದ್ರತಾ ಮತ್ತು ಪಿಂಚಣಿ ನಿರ್ದೇಶನಾಲಯದಡಿ ಈ ಕೆಳಕಂಡಂತೆ ಒಟ್ಟು 9 ಮಾಸಿಕ ಪಿಂಚಣಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ ಹಾಗೂ ವಿವಿಧ ಯೋಜನೆಗಳಡಿ ಸೌಲಭ್ಯ ಪಡೆಯುತ್ತಿರುವ ಫಲಾನುಭವಿಗಳ ವಿವರಗಳನ್ನು **ಅನುಬಂಧ 1** ರಲ್ಲಿ ನೀಡಿದೆ. |

| ಕ್ರ.ಸಂ. | ಮಾಸಿಕ ಪಿಂಚಣಿ ಯೋಜನೆಗಳು |
|---|---|
| 1. | ವೃದ್ಧಾಪ್ಯ ಪಿಂಚಣಿ ಯೋಜನೆ |
| 2. | ವಿಧವಾ ಪಿಂಚಣಿ ಯೋಜನೆ |
| 3. | ಅಂಗವಿಕಲ ಪಿಂಚಣಿ ಯೋಜನೆ |
| 4. | ಸಂಧ್ಯಾ ಸುರಕ್ಷಾ ಯೋಜನೆ |
| 5. | ಮನಸ್ವಿನಿ ಯೋಜನೆ |
| 6. | ಮೈತ್ರಿ ಯೋಜನೆ |
| 7. | ಸಾಲದ ಭಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತರ ಪತ್ನಿಗೆ ಯೋಜನೆ |
| 8. | ಆಸಿಡ್ ದಾಳಿಗೆ ಒಳಗಾದ ಮಹಿಳೆಯರಿಗೆ ಪಿಂಚಣಿ |
| 9. | ಎಂಡೋಸಲ್ಫಾನ್ ಸಂತ್ರಸ್ತರಿಗೆ ಪಿಂಚಣಿ ಯೋಜನೆ |

| | | |
|---|---|---|
| ಈ) | ಕಳೆದ ಒಂದು ವರ್ಷದಿಂದ ಮಾಸಾಶನ ಮಂಜೂರಾದ ಫಲಾನುಭವಿಗಳ ಖಾತೆಗೆ ಹಣ ಜಮೆಯಾಗದಿರುವ ಪ್ರಕರಣಗಳೆಷ್ಟು; ಯಾವ ಕಾರಣಕ್ಕಾಗಿ ಬಾಕಿ ಉಳಿಸಲಾಗಿದೆ? (ಫಲಾನುಭವಿವಾರು, ಗ್ರಾಮವಾರು, ತಾಲ್ಲೂಕು ವಾರು ವಿವರ ನೀಡುವುದು) | ಕಳೆದ ಒಂದು ವರ್ಷದಿಂದ ಮಂಜೂರಾದ ಫಲಾನುಭವಿಗಳಲ್ಲಿ ಒಟ್ಟು 10,120 ಪ್ರಕರಣಗಳಲ್ಲಿ ಈ ಕೆಳಕಂಡ ಕಾರಣಗಳಿಂದಾಗಿ ಖಾತೆಗೆ ಹಣ ಜಮೆಯಾಗದೆ ಬಾಕಿ ಇರುತ್ತದೆ. |

| ಕ್ರ. ಸಂ | ಕಾರಣ | ಸಂಖ್ಯೆ |
|---|---|---|
| 1. | No Such Account | 7911 |
| 2. | Account Description Does not Tally | 38 |
| 3. | Unclaimed/DEAF accounts | 91 |
| 4. | Invalid account (NRE/PPF/CC/Loan/FD) | 230 |
| 5. | A/c Blocked or Frozen | 544 |
| 6. | Account closed or Transferred | 1306 |
| | **Grand Total** | **10120** |

ಫಲಾನುಭವಿಯ ವಿವರವಾದ ಪಟ್ಟಿಯನ್ನು **CD** ಯಲ್ಲಿ ಅನುಬಂಧಿಸಿ ನೀಡಿದೆ.

**ಸಂಖ್ಯೆ: ಕಂಇ 52 ಎಲ್ಆರ್‌ಡಿ 2022**

(ಆರ್.ಅಶೋಕ)
ಕಂದಾಯ ಸಚಿವರು

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2019-20ನೇ ಸಾಲಿನಲ್ಲಿ ಹೊಸ ತಾಲ್ಲೂಕುಗಳನ್ನು ರಚಿಸುವ ಬಗ್ಗೆ.

ಓದಲಾಗಿದೆ:- 2019-20ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ:260.

****

ಪ್ರಸ್ತಾವನೆ:-

ರಾಜ್ಯದಲ್ಲಿ ಪರಿಣಾಮಕಾರಿಯಾದ, ಸಮರ್ಥವಾದ ಆಡಳಿತ ನೀಡುವ ಹಾಗೂ ಸಾರ್ವಜನಿಕರಿಗೆ ಅನುಕೂಲವಾಗುವ ರೀತಿಯಲ್ಲಿ ಸೇವೆಗಳನ್ನು ನೀಡುವ ಉದ್ದೇಶದಿಂದ 2019-20ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ: 260 ರಲ್ಲಿ "ರಾಜ್ಯದ ಭೌಗೋಳಿಕ ಮತ್ತು ಆಡಳಿತಾತ್ಮಕ ಅಗತ್ಯತೆಗಳನ್ನು ಪರಿಗಣಿಸಿ, ರಾಮನಗರ ಜಿಲ್ಲೆಯ ಹಾರೋಹಳ್ಳಿ, ಚಿಕ್ಕಬಳ್ಳಾಪುರ ಜಿಲ್ಲೆಯ ಚೇಳೂರು, ಬಾಗಲಕೋಟೆ ಜಿಲ್ಲೆಯ ತೇರದಾಳ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಕಳಸಾ ವನ್ನು ಹೊಸ ತಾಲ್ಲೂಕುಗಳನ್ನಾಗಿ ರಚಿಸಲಾಗುವುದು" ಎಂದು ಘೋಷಿಸಲಾಗಿದೆ ಹಾಗೂ ಇವುಗಳ ಜೊತೆಗೆ ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಕೊಡಗು ಜಿಲ್ಲೆಯ ಪೊನ್ನಂಪೇಟೆ ಹಾಗೂ ಕುಶಾಲನಗರ, ವಿಜಯಪುರ ಜಿಲ್ಲೆಯ ಆಲಮೇಲ, ದಕ್ಷಿಣ ಕನ್ನಡ ಜಿಲ್ಲೆಯ ಮುಲ್ಕಿ ಹಾಗೂ ಉಲ್ಲಾಳ, ಬೆಳಗಾವಿ ಜಿಲ್ಲೆಯ ಯರಗಟ್ಟಿ, ಮೈಸೂರು ಜಿಲ್ಲೆಯ ಸಾಲಿಗ್ರಾಮ, ಹಾಸನ ಜಿಲ್ಲೆಯ ಶಾಂತಿಗ್ರಾಮಗಳನ್ನು ಹೊಸ ತಾಲ್ಲೂಕುಗಳನ್ನಾಗಿ ರಚಿಸಲು ತೀರ್ಮಾನಿಸಲಾಗಿದೆ.

ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ತಾಲ್ಲೂಕುಗಳನ್ನು ಪುನರ್ ರಚನೆ ಮಾಡುವ ಸಂಬಂಧ ಈ ಹಿಂದೆ ಶ್ರೀ ವಾಸುದೇವರಾವ್ ಆಯೋಗ 1973 ರಲ್ಲಿ, ಶ್ರೀ ಟಿ.ಎಂ. ಹುಂಡೇಕರ್ ಸಮಿತಿ 1984 ರಲ್ಲಿ, ಶ್ರೀ ಪಿ.ಸಿ. ಗದ್ದಿಗೌಡರ್ ಸಮಿತಿ 1986 ರಲ್ಲಿ ಹಾಗೂ ಶ್ರೀ ಎಂ.ಬಿ. ಪ್ರಕಾಶ್ ಇವರ ಅಧ್ಯಕ್ಷತೆಯಲ್ಲಿ 2007ರಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಗಳನ್ನು ರಚಿಸಲಾಗಿತ್ತು. ಸದರಿ ಸಮಿತಿಗಳಲ್ಲಿ, ಪ್ರಸ್ತುತ ಹೊಸದಾಗಿ ರಚಿಸಲು ತೀರ್ಮಾನಿಸಿರುವ ತಾಲ್ಲೂಕುಗಳ ಪೈಕಿ ವಿಜಯಪುರ ಜಿಲ್ಲೆಯ ಆಲಮೇಲ ಪಟ್ಟಣವನ್ನು ಹೊಸ ತಾಲ್ಲೂಕನ್ನಾಗಿ ರಚಿಸಲು ಶ್ರೀ ವಾಸುದೇವರಾವ್ ಆಯೋಗವು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಮುಲ್ಕಿ ತಾಲ್ಲೂಕನ್ನು ರಚಿಸಲು ಶ್ರೀ ಟಿ.ಎಂ.ಹುಂಡೇಕರ್ ಮತ್ತು ಶ್ರೀ ಪಿ.ಸಿ.ಗದ್ದಿಗೌಡರ್ ಸಮಿತಿಗಳು ಶಿಫಾರಸ್ಸು ಮಾಡಿರುತ್ತವೆ. ಉಳಿದಂತೆ, ರಾಮನಗರ ಜಿಲ್ಲೆಯ ಹಾರೋಹಳ್ಳಿ, ಚಿಕ್ಕಬಳ್ಳಾಪುರ ಜಿಲ್ಲೆಯ ಚೇಳೂರು, ಬಾಗಲಕೋಟೆ ಜಿಲ್ಲೆಯ ತೇರದಾಳ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಕಳಸಾ, ಬೆಳಗಾವಿ ಜಿಲ್ಲೆಯ ಯರಗಟ್ಟಿ, ಕೊಡಗು ಜಿಲ್ಲೆಯ ಪೊನ್ನಂಪೇಟೆ ಹಾಗೂ ಕುಶಾಲನಗರ, ಮೈಸೂರು ಜಿಲ್ಲೆಯ ಸಾಲಿಗ್ರಾಮ,

ದಕ್ಷಿಣ ಕನ್ನಡ ಜಿಲ್ಲೆಯ ಉಲ್ಲಾಳ ಹಾಗೂ ಹಾಸನ ಜಿಲ್ಲೆಯ ಶಾಂತಿಗ್ರಾಮಗಳನ್ನು ಹೊಸ ತಾಲ್ಲೂಕನ್ನಾಗಿ ರಚನೆ ಮಾಡಲು ಯಾವ ಸಮಿತಿಯು ಶಿಫಾರಸ್ಸು ಮಾಡಿರುವುದಿಲ್ಲ.

ರಾಜ್ಯದಲ್ಲಿ ಪರಿಣಾಮಕಾರಿಯಾದ, ಸಮರ್ಥವಾದ ಆಡಳಿತ ನೀಡುವ ಹಾಗೂ ಸಾರ್ವಜನಿಕರಿಗೆ ಅನುಕೂಲವಾಗುವ ರೀತಿಯಲ್ಲಿ ಸೇವೆಗಳನ್ನು ನೀಡುವ ಉದ್ದೇಶದಿಂದ ಸೂಕ್ತ ವಿಸ್ತಾರದ ಹಾಗೂ ಜನ ಸಂಖ್ಯೆಯ ತಾಲ್ಲೂಕುಗಳು ಸಮರ್ಥ ಆಡಳಿತಕ್ಕೆ ಅನಿವಾರ್ಯ, ತಾಲ್ಲೂಕು ಮಟ್ಟದ ಅಧಿಕಾರಿಗಳು ಗ್ರಾಮಗಳಿಗೆ ಭೇಟಿ ನೀಡಲು, ಗ್ರಾಮಸ್ಥರನ್ನು ಭೇಟಿ ಮಾಡಲು ಹಾಗೂ ಗ್ರಾಮಗಳ ಜನತೆ ತಾಲ್ಲೂಕು ಮಟ್ಟದ ಕಛೇರಿಗಳನ್ನು ಸಂಪರ್ಕಿಸಲು ವಿಸ್ತಾರವಾದ ತಾಲ್ಲೂಕುಗಳ ಪುನರ್‌ರಚನೆ ಅವಶ್ಯಕವಾಗಿರುತ್ತದೆ. ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 25 ಭೂದಾಪು 2019, ಬೆಂಗಳೂರು, ದಿನಾಂಕ:28.02.2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2019-20ನೇ ಸಾಲಿನಲ್ಲಿ ಈ ಕೆಳಕಂಡ ಹೊಸ ತಾಲ್ಲೂಕುಗಳನ್ನು ರಚನೆ ಮಾಡಲು ತಾತ್ವಿಕವಾಗಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.

1) ರಾಮನಗರ ಜಿಲ್ಲೆ - ಹಾರೋಹಳ್ಳಿ
2) ಚಿಕ್ಕಬಳ್ಳಾಪುರ ಜಿಲ್ಲೆ - ಚೇಳೂರು
3) ಬಾಗಲಕೋಟೆ ಜಿಲ್ಲೆ - ತೇರದಾಳ
4) ಚಿಕ್ಕಮಗಳೂರು ಜಿಲ್ಲೆ - ಕಳಸಾ
5) ಕೊಡಗು ಜಿಲ್ಲೆ - ಪೊನ್ನಂಪೇಟೆ
6) ಕೊಡಗು ಜಿಲ್ಲೆ - ಕುಶಾಲನಗರ
7) ವಿಜಯಪುರ ಜಿಲ್ಲೆ - ಆಲಮೇಲ
8) ದಕ್ಷಿಣ ಕನ್ನಡ ಜಿಲ್ಲೆ - ಮುಲ್ಕಿ
9) ದಕ್ಷಿಣ ಕನ್ನಡ ಜಿಲ್ಲೆ - ಉಲ್ಲಾಳ
10) ಮೈಸೂರು ಜಿಲ್ಲೆ - ಸಾಲಿಗ್ರಾಮ
11) ಹಾಸನ ಜಿಲ್ಲೆ - ಶಾಂತಿಗ್ರಾಮ
12) ಬೆಳಗಾವಿ ಜಿಲ್ಲೆ - ಯರಗಟ್ಟಿ

ಕಂದಾಯ ಇಲಾಖೆಯ ವತಿಯಿಂದ ಹೊಸ ತಾಲ್ಲೂಕು ಕಛೇರಿಯನ್ನು ತೆರೆಯಲು ಮತ್ತು ಇತರೆ ಇಲಾಖೆಗಳ ತಾಲ್ಲೂಕು ಮಟ್ಟದ ಕಛೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತ ಹಂತವಾಗಿ ತೆರೆಯಲು ಸಹ ಅನುಮತಿ ನೀಡಲಾಗಿದೆ.

ಹೊಸ ತಾಲ್ಲೂಕು ಕಛೇರಿಯನ್ನು ತೆರೆಯಲು ತಗಲುವ ವೆಚ್ಚವನ್ನು 2019-20ನೇ ಆಯವ್ಯಯ ಲೆಕ್ಕಶೀರ್ಷಿಕೆ 2053-00-800-0-07 ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಸಿಎಸ್.ಎಫ್‌ಡಿ.1477 ದಿನಾಂಕ: 22.02.2019 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 11 ಪಿಎಫ್‌ಒ 2019 ದಿನಾಂಕ: 23.02.2019 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಸಿ.ಪುಟ್ಟಸಂಜಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

ಇವರಿಗೆ:-

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ರವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು ಕೋರಿದೆ.

ಪ್ರತಿ:-

1. ಪ್ರಧಾನ ಮಹಾಲೇಖಪಾಲರು, (ಜಿ&ಎಸ್.ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು, (ಇ&ಆರ್‌ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು, (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560001.
4. ಎಲ್ಲಾ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು/ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು
5. ಪ್ರಾದೇಶಿಕ ಆಯುಕ್ತರು, ಬೆಂಗಳೂರು, ಮೈಸೂರು, ಕಲಬುರಗಿ ಮತ್ತು ಬೆಳಗಾವಿ
6. ಎಲ್ಲಾ ಜಿಲ್ಲಾಧಿಕಾರಿಗಳಿಗೆ
7. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಸಚಿವ ಸಂಪುಟ) (ವಿಷಯ ಸಂಖ್ಯೆ: ಸಿ:169/2019)
8. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು
9. ಉಪ ನಿರ್ದೇಶಕರು, ಖಜಾನೆ ಇಲಾಖೆ(ಖಜಾನೆ ಜಾಲ), ಖನಿಜ ಭವನ, ಬೆಂಗಳೂರು.
10. ಆಂತರಿಕ ಆರ್ಥಿಕ ಸಲಹೆಗಾರರು, ಕಂದಾಯ ಇಲಾಖೆ
11. ಸರ್ಕಾರದ ಅಧೀನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ(ವೆಚ್ಚ-7/8).
12. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಆಪ್ತ ಕಾರ್ಯದರ್ಶಿ

13. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ(ವಿಪತ್ತು ನಿರ್ವಹಣೆ) ಇವರ ಆಪ್ತ ಕಾರ್ಯದರ್ಶಿ
14. ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ(ಭೂಮಾಪನ ಮತ್ತು ಸೇ-1) ಇವರ ಆಪ್ತ ಸಹಾಯಕರು
15. ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸಮನ್ವಯ)
16. ಶಾ.ರ.ಕ/ಹೆಚ್ಚುವರಿ ಪ್ರತಿ.

ಹೊರಡಿಸಿದೆ
ದಿನಾಂಕ: 21/03/2019

6\



<u>ಕರ್ನಾಟಕ ಸರ್ಕಾರದ ನಡವಳಿಗಳು</u>

ವಿಷಯ: ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕಿನ ಅರಕೇರಾ ಗ್ರಾಮ ಪಂಚಾಯತಿಯನ್ನು ಹೊಸ ತಾಲ್ಲೂಕನ್ನಾಗಿ ರಚಿಸುವ ಬಗ್ಗೆ.

-*-*-*-

<u>ಪ್ರಸ್ತಾವನೆ:-</u>

ರಾಜ್ಯದಲ್ಲಿ ಪರಿಣಾಮಕಾರಿಯಾದ, ಸಮರ್ಥವಾದ ಆಡಳಿತ ನೀಡುವ ಹಾಗೂ ಸಾರ್ವಜನಿಕರಿಗೆ ಅನುಕೂಲವಾಗುವ ರೀತಿಯಲ್ಲಿ ಸೇವೆಗಳನ್ನು ನೀಡುವ ಉದ್ದೇಶದಿಂದ ಸರ್ಕಾರದ ಸಾಮಾನ್ಯ ನೀತಿಯಂತೆ ಕಾಲಕಾಲಕ್ಕೆ ತಾಲ್ಲೂಕುಗಳನ್ನು ಪುನರ್ ರಚಿಸಲಾಗುತ್ತಿದೆ. ಇತ್ತೀಚೆಗೆ 2019-20ನೇ ಸಾಲಿನಲ್ಲಿ 13 ಹೊಸ ತಾಲ್ಲೂಕುಗಳನ್ನು ರಚಿಸಲು ತಾತ್ವಿಕವಾಗಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ. ಇವುಗಳ ಜೊತೆಗೆ ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅರಕೇರಾ ಗ್ರಾಮ ಪಂಚಾಯತಿಯನ್ನು ಹೊಸ ತಾಲ್ಲೂಕನ್ನಾಗಿ ರಚಿಸುವ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗಿದೆ.

ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ತಾಲ್ಲೂಕುಗಳನ್ನು ಪುನರ್ ರಚನೆ ಮಾಡುವ ಸಂಬಂಧ ಈ ಹಿಂದೆ ಶ್ರೀ ವಾಸುದೇವರಾವ್ ಆಯೋಗ 1973 ರಲ್ಲಿ, ಶ್ರೀ ಟಿ.ಎಂ. ಹುಂಡೇಕರ್ ಸಮಿತಿ 1984 ರಲ್ಲಿ, ಶ್ರೀ ಪಿ.ಸಿ. ಗದ್ದಿಗೌಡರ್ ಸಮಿತಿ 1986 ರಲ್ಲಿ ಹಾಗೂ ಶ್ರೀ ಎಂ.ಬಿ. ಪ್ರಕಾಶ್ ಇವರ ಅಧ್ಯಕ್ಷತೆಯಲ್ಲಿ 2007ರಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಗಳನ್ನು ರಚಿಸಲಾಗಿತ್ತು. ಅವುಗಳಲ್ಲಿ ಅರಕೇರಾ ಗ್ರಾಮ ಪಂಚಾಯತಿಯನ್ನು ಹೊಸ ತಾಲ್ಲೂಕನ್ನಾಗಿ ರಚನೆ ಮಾಡಲು ಯಾವ ಸಮಿತಿಯು ಶಿಫಾರಸ್ಸು ಮಾಡಿರುವುದಿಲ್ಲ.

ರಾಜ್ಯದ ಜನತೆಗೆ ಸಮರ್ಥವಾದ ಆಡಳಿತ ನೀಡಲು ಹಾಗೂ ಸಾರ್ವಜನಿಕರಿಗೆ ಅನುಕೂಲವಾಗುವ ರೀತಿಯಲ್ಲಿ ಸೇವೆಗಳನ್ನು ನೀಡುವ ಉದ್ದೇಶದಿಂದ ಭೌಗೋಳಿಕವಾಗಿ ಸೂಕ್ತ ವಿಸ್ತಾರವುಳ್ಳ ಹಾಗೂ ಸೂಕ್ತ ಜನಸಂಖ್ಯೆ ಹೊಂದಿರುವ ತಾಲ್ಲೂಕುಗಳು ಸಮರ್ಥ ಆಡಳಿತಕ್ಕೆ ಅನಿವಾರ್ಯ. ತಾಲ್ಲೂಕು ಮಟ್ಟದ ಅಧಿಕಾರಿಗಳು ಗ್ರಾಮಗಳಿಗೆ ಭೇಟಿ ನೀಡಲು, ಗ್ರಾಮಸ್ಥರನ್ನು ಭೇಟಿ ಮಾಡಲು ಹಾಗೂ ಗ್ರಾಮಗಳ ಜನತೆ ತಾಲ್ಲೂಕು ಮಟ್ಟದ ಕಛೇರಿಗಳನ್ನು ಸಂಪರ್ಕಿಸಲು ವಿಸ್ತಾರವಾದ ತಾಲ್ಲೂಕುಗಳ ಪುನರ್ ರಚನೆ ಅವಶ್ಯಕವಾಗಿರುತ್ತದೆ.

ದೇವದುರ್ಗ ತಾಲ್ಲೂಕು ಡಾ॥ ನಂಜುಂಡಪ್ಪ ವರದಿಯನ್ವಯ ಅತ್ಯಂತ ಹಿಂದುಳಿದ ತಾಲ್ಲೂಕಾಗಿದೆ. ಈ ತಾಲ್ಲೂಕಿನ ಅರಕೇರಾ ಪಟ್ಟಣವು ಗ್ರಾಮ ಪಂಚಾಯತಿ ಕೇಂದ್ರಸ್ಥಾನವಾಗಿದ್ದು, ದೇವದುರ್ಗ ತಾಲ್ಲೂಕು ಕೇಂದ್ರದಿಂದ ಸುಮಾರು 20 ಕಿ.ಮೀ ದೂರದಲ್ಲಿರುತ್ತದೆ. ಅರಕೇರಾವನ್ನು ತಾಲ್ಲೂಕು ಕೇಂದ್ರವಾಗಿ ರಚಿಸಿದರೆ ಸುಮಾರು 15 ಕಿ.ಮೀ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಿಗೆ ಹಾಗೂ ತಾಂಡಾ/ದೊಡ್ಡಿಗಳಿಗೆ ಅನುಕೂಲವಾಗಲಿದೆ. ಅರಕೇರಾ ಪಟ್ಟಣವನ್ನು ತಾಲ್ಲೂಕು ಕೇಂದ್ರವಾಗಿ ರಚಿಸಿದಲ್ಲಿ ಅಕ್ಕಪಕ್ಕದ ಹಳ್ಳಿಗಳ ರೈತರಿಗೆ, ಸಾರ್ವಜನಿಕರಿಗೆ ಹೆಚ್ಚಿನ ಅನುಕೂಲವಾಗಲಿದ್ದು, ಇದರಿಂದ ದೇವದುರ್ಗ ಕೇಂದ್ರಸ್ಥಾನಕ್ಕೆ ಸುಮಾರು 40 ಕಿ.ಮೀ.ಗೂ ಹೆಚ್ಚು ದೂರವನ್ನು ಕ್ರಮಿಸುವುದು ಉಳಿತಾಯವಾಗಲಿದೆ.

ಪ್ರಸ್ತುತ ಅರಕೇರಾ ಪಟ್ಟಣದಲ್ಲಿ ನಾಡಕಛೇರಿ, ಗ್ರಾಮ ಪಂಚಾಯತಿ ಕಾರ್ಯಾಲಯ, ಸಮುದಾಯ ಆರೋಗ್ಯ ಕೇಂದ್ರ, ಅಗ್ನಿಶಾಮಕ ದಳ, ಪಶು ಚಿಕಿತ್ಸಾಲಯ, ಶಿಕ್ಷಣ ಸಂಸ್ಥೆಗಳು, ಕೃಷಿ ಸಹಾಯಕ ಕಚೇರಿ ಸೇರಿದಂತೆ ಇತರೆ ಕಛೇರಿಗಳಿರುತ್ತವೆ. ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಅರಕೇರಾ ಗ್ರಾಮ ಪಂಚಾಯತಿ ಕೇಂದ್ರವನ್ನು ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 4(4) ರಂತೆ ಹೊಸ ತಾಲ್ಲೂಕು ಕೇಂದ್ರವನ್ನಾಗಿ ರಚಿಸಲು ಉದ್ದೇಶಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 25 ಭೂದಾಖ 2019 (ಭಾ-2)**

**ಬೆಂಗಳೂರು, ದಿನಾಂಕ: 29-09-2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅರಕೇರಾ ಗ್ರಾಮ ಪಂಚಾಯತಿಯನ್ನು ಹೊಸ ತಾಲ್ಲೂಕನ್ನಾಗಿ ರಚನೆ ಮಾಡಲು ತಾತ್ವಿಕವಾಗಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಕಂದಾಯ ಇಲಾಖೆಯ ವತಿಯಿಂದ ಹೊಸ ತಾಲ್ಲೂಕು ಕಛೇರಿಯನ್ನು ತೆರೆಯಲು ಮತ್ತು ಇತರೆ ಇಲಾಖೆಗಳ ತಾಲ್ಲೂಕು ಮಟ್ಟದ ಕಛೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತ ಹಂತವಾಗಿ ತೆರೆಯಲು ಸಹ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ವ್ಯವಹಾರಗಳ ನಿರ್ವಹಣೆ) ನಿಯಮಾವಳಿ 1977ರ 17ನೇ ನಿಯಮದ (2)ನೇ ಉಪ ನಿಯಮದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

Rajyashree V.T
(ವಿ.ಟಿ.ರಾಜ್ಯಶ್ರೀ) 29/9
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

ಇವರಿಗೆ:-

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ರವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು ಕೋರಿದೆ.

ಪ್ರತಿಗಳು:-

1. ಪ್ರಧಾನ ಮಹಾಲೇಖಪಾಲರು, (ಜಿ&ಎಸ್.ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು, (ಇ&ಆರ್‌ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು, (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560001.
4. ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು

59

5. ಪ್ರಾದೇಶಿಕ ಆಯುಕ್ತರು, ಬೆಂಗಳೂರು/ಮೈಸೂರು/ಕಲಬುರಗಿ/ಬೆಳಗಾವಿ ವಿಭಾಗ
6. ಎಲ್ಲಾ ಜಿಲ್ಲೆಗಳು ಜಿಲ್ಲಾಧಿಕಾರಿಗಳು
7. ಉಪ ವಿಭಾಗಾಧಿಕಾರಿ, ರಾಯಚೂರು ಉಪ ವಿಭಾಗ, ರಾಯಚೂರು
8. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಸಚಿವ ಸಂಪುಟ) (ವಿಷಯ ಸಂಖ್ಯೆ: ಸಿ:416/2020)
9. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು
10. ಉಪ ನಿರ್ದೇಶಕರು, ಖಜಾನೆ ಇಲಾಖೆ (ಖಜಾನೆ ಜಾಲ), ಖನಿಜ ಭವನ, ಬೆಂಗಳೂರು.
11. ಆಂತರಿಕ ಆರ್ಥಿಕ ಸಲಹೆಗಾರರು, ಕಂದಾಯ ಇಲಾಖೆ
12. ಸರ್ಕಾರದ ಅಧೀನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ(ವೆಚ್ಚ-7/8).
13. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಆಪ್ತ ಕಾರ್ಯದರ್ಶಿ
14. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಇವರ ಆಪ್ತ ಕಾರ್ಯದರ್ಶಿ
15. ಸರ್ಕಾರದ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ, ಸೇ-1 ಮತ್ತು ವಿಶೇಷ ಕೋಶ) ಇವರ ಆಪ್ತ ಸಹಾಯಕರು
16. ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸಮನ್ವಯ)
17. ಶಾ.ರ.ಕ/ಹೆಚ್ಚುವರಿ ಪ್ರತಿ.

ಹೊರಡಿಸಿದೆ.
30/09/2020

65

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಮಂಚೇನಹಳ್ಳಿ ಹೋಬಳಿಯನ್ನು ಹೊಸ ತಾಲ್ಲೂಕನ್ನಾಗಿ ರಚಿಸುವ ಬಗ್ಗೆ.

****

**ಪ್ರಸ್ತಾವನೆ:-**

ರಾಜ್ಯದಲ್ಲಿ ಪರಿಣಾಮಕಾರಿಯಾದ, ಸಮರ್ಥವಾದ ಆಡಳಿತ ನೀಡುವ ಹಾಗೂ ಸಾರ್ವಜನಿಕರಿಗೆ ಅನುಕೂಲವಾಗುವ ರೀತಿಯಲ್ಲಿ ಸೇವೆಗಳನ್ನು ನೀಡುವ ಉದ್ದೇಶದಿಂದ 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ ಹಾಗೂ ಸರ್ಕಾರದ ತೀರ್ಮಾನದಂತೆ ಸರ್ಕಾರದ ಆದೇಶ ಸಂಖ್ಯೆ: ಕಂಇ 25 ಭೂದಾಮ 2019 ದಿನಾಂಕ: 28.02.2019 ರ ಆದೇಶದಲ್ಲಿ 12 ಹೊಸ ತಾಲ್ಲೂಕುಗಳನ್ನು ರಚಿಸಲು ತಾತ್ವಿಕವಾಗಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ. ಇವುಗಳ ಜೊತೆಗೆ ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಮಂಚೇನಹಳ್ಳಿ ಹೋಬಳಿಯನ್ನು ಹೊಸ ತಾಲ್ಲೂಕನ್ನಾಗಿ ರಚಿಸುವ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗಿದೆ.

ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ತಾಲ್ಲೂಕುಗಳನ್ನು ಪುನರ್ ರಚನೆ ಮಾಡುವ ಸಂಬಂಧ ಈ ಹಿಂದೆ ಶ್ರೀ ವಾಸುದೇವರಾವ್ ಆಯೋಗ 1973 ರಲ್ಲಿ, ಶ್ರೀ ಟಿ.ಎಂ. ಹುಂಡೇಕರ್ ಸಮಿತಿ 1984 ರಲ್ಲಿ, ಶ್ರೀ ಪಿ.ಸಿ. ಗದ್ದಿಗೌಡರ್ ಸಮಿತಿ 1986 ರಲ್ಲಿ ಹಾಗೂ ಶ್ರೀ ಎಂ.ಬಿ. ಪ್ರಕಾಶ್ ಇವರ ಅಧ್ಯಕ್ಷತೆಯಲ್ಲಿ 2007ರಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಗಳನ್ನು ರಚಿಸಲಾಗಿತ್ತು. ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಮಂಚೇನಹಳ್ಳಿ ಹೋಬಳಿಯನ್ನು ಹೊಸ ತಾಲ್ಲೂಕನ್ನಾಗಿ ರಚನೆ ಮಾಡಲು ಯಾವ ಸಮಿತಿಯು ಶಿಫಾರಸ್ಸು ಮಾಡಿರುವುದಿಲ್ಲ.

ರಾಜ್ಯದಲ್ಲಿ ಪರಿಣಾಮಕಾರಿಯಾದ, ಸಮರ್ಥವಾದ ಆಡಳಿತ ನೀಡುವ ಹಾಗೂ ಸಾರ್ವಜನಿಕರಿಗೆ ಅನುಕೂಲವಾಗುವ ರೀತಿಯಲ್ಲಿ ಸೇವೆಗಳನ್ನು ನೀಡುವ ಉದ್ದೇಶದಿಂದ ಸೂಕ್ತ ವಿಸ್ತಾರದ ಹಾಗೂ ಜನ ಸಂಖ್ಯೆಯ ತಾಲ್ಲೂಕುಗಳು ಸಮರ್ಥ ಆಡಳಿತಕ್ಕೆ ಅನಿವಾರ್ಯ. ತಾಲ್ಲೂಕು ಮಟ್ಟದ ಅಧಿಕಾರಿಗಳು ಗ್ರಾಮಗಳಿಗೆ ಭೇಟಿ ನೀಡಲು, ಗ್ರಾಮಸ್ಥರನ್ನು ಭೇಟಿ ಮಾಡಲು ಹಾಗೂ ಗ್ರಾಮಗಳ ಜನತೆ ತಾಲ್ಲೂಕು ಮಟ್ಟದ ಕಛೇರಿಗಳನ್ನು ಸಂಪರ್ಕಿಸಲು ವಿಸ್ತಾರವಾದ ತಾಲ್ಲೂಕುಗಳ ಪುನರ್‌ರಚನೆ ಅವಶ್ಯಕವಾಗಿರುತ್ತದೆ.

ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಮಂಚೇನಹಳ್ಳಿ ಹೋಬಳಿಯು ಜಿಲ್ಲೆಯಲ್ಲಿ ಅತಿ ದೊಡ್ಡ ಹೋಬಳಿಯಾಗಿದ್ದು, ಈ ಹೋಬಳಿ ಹಾಗೂ ತೊಂಡೆಬಾವಿ ಹೋಬಳಿಯಲ್ಲಿ ಒಟ್ಟು 11 ಗ್ರಾಮ ಪಂಚಾಯತಿಗಳು ಹಾಗೂ 15 ಕಂದಾಯ ವೃತ್ತಗಳು ಇರುತ್ತವೆ. ಇದರ ಭೌಗೋಳಿಕ ವಿಸ್ತೀರ್ಣ ಸುಮಾರು 159 ಚ.ಕಿ.ಮೀ ಇದ್ದು 58,332.19 ಎಕರೆ/ಗುಂಟೆ ಸಾಗುವಳಿ ಜಮೀನಿನ ಭೌಗೋಳಿಕ ವಿಸ್ತೀರ್ಣ ಇರುತ್ತದೆ. ಮಂಚೇನಹಳ್ಳಿ ಹೋಬಳಿಯಲ್ಲಿ ನಾಡಕಛೇರಿ, ರಾಜಸ್ವ ನಿರೀಕ್ಷಕರ ಕಾರ್ಯಾಲಯ, ಪ್ರಾಥಮಿಕ ಆರೋಗ್ಯ ಕೇಂದ್ರ, ಪೋಲೀಸ್ ಠಾಣೆ, ರೈತ ಸಂಪರ್ಕ ಕೇಂದ್ರ ಹಾಗೂ ಇತರೆ ಕಛೇರಿಗಳು ಇದ್ದು ಇದು ಪ್ರಮುಖ ವಾಣಿಜ್ಯ ಕೇಂದ್ರವಾಗಿರುತ್ತದೆ. ಹೀಗಾಗಿ ಸದರಿ ಹೋಬಳಿಯನ್ನು ಹೊಸ ತಾಲ್ಲೂಕನ್ನಾಗಿ ರಚಿಸುವ ಬಗ್ಗೆ ಜನಪ್ರತಿನಿಧಿಗಳಿಂದ ಹಾಗೂ ಸಾರ್ವಜನಿಕರಿಂದ ಮನವಿಗಳು ಸ್ವೀಕೃತವಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಮಂಚೇನಹಳ್ಳಿ

ಹೋಬಳಿ ಕೇಂದ್ರವನ್ನು ಕರ್ನಾಟಕ ಭೂಕಂದಾಯ ಅಧಿನಿಯಮ 1964 ರ ಕಲಂ 4(4) ರಂತೆ ಹೊಸ ತಾಲ್ಲೂಕು ಕೇಂದ್ರವನ್ನಾಗಿ ರಚಿಸಲು ಉದ್ದೇಶಿಸಲಾಗಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ:ಕಂಇ 09 ಎಲ್‌ಆರ್‌ಡಿ 2019**

**ಬೆಂಗಳೂರು, ದಿನಾಂಕ:14.11.2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2019-20ನೇ ಸಾಲಿನಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಮಂಚೇನಹಳ್ಳಿ ಹೋಬಳಿಯನ್ನು ಹೊಸ ತಾಲ್ಲೂಕನ್ನಾಗಿ ರಚನೆ ಮಾಡಲು ತಾತ್ವಿಕವಾಗಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಕಂದಾಯ ಇಲಾಖೆಯ ವತಿಯಿಂದ ಹೊಸ ತಾಲ್ಲೂಕು ಕಛೇರಿಯನ್ನು ತೆರೆಯಲು ಮತ್ತು ಇತರೆ ಇಲಾಖೆಗಳ ತಾಲ್ಲೂಕು ಮಟ್ಟದ ಕಛೇರಿಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತ ಹಂತವಾಗಿ ತೆರೆಯಲು ಸಹ ಅನುಮತಿ ನೀಡಲಾಗಿದೆ.

ಹೊಸ ತಾಲ್ಲೂಕು ಕಛೇರಿಯನ್ನು ತೆರೆಯಲು ತಗಲುವ ವೆಚ್ಚವನ್ನು 2019-20ನೇ ಆಯವ್ಯಯ ಲೆಕ್ಕಶೀರ್ಷಿಕೆ 2053-00-800-0-07 ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕರ್ನಾಟಕ ಸರ್ಕಾರ(ಕಾರ್ಯಕಲಾಪಗಳ ವ್ಯವಹಾರಗಳ ನಿರ್ವಹಣೆ) ನಿಯಮಾವಳಿ 1977ರ 17ನೇ ನಿಯಮದ (2)ನೇ ಉಪನಿಯಮದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

14/11/19
(ಸಿ.ಪುಟ್ಟನಂಜಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)
14/11

**ಇವರಿಗೆ:-**

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ರವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು ಕೋರಿದೆ.

**ಪ್ರತಿ:-**

1. ಪ್ರಧಾನ ಮಹಾಲೇಖಪಾಲರು, (ಜಿ&ಎಸ್.ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು, (ಇ&ಆರ್‌ಎಸ್.ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು, (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5329, ಬೆಂಗಳೂರು-560001.
4. ಎಲ್ಲಾ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು/ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು
5. ಪ್ರಾದೇಶಿಕ ಆಯುಕ್ತರು, ಬೆಂಗಳೂರು
6. ಎಲ್ಲಾ ಜಿಲ್ಲಾಧಿಕಾರಿಗಳಿಗೆ

65

7. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಸಚಿವ ಸಂಪುಟ) (ವಿಷಯ ಸಂಖ್ಯೆ: ಸಿ:656/2019)
8. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು
9. ಉಪ ನಿರ್ದೇಶಕರು, ಖಜಾನೆ ಇಲಾಖೆ(ಖಜಾನೆ ಜಾಲ), ಖನಿಜ ಭವನ, ಬೆಂಗಳೂರು.
10. ಆಂತರಿಕ ಆರ್ಥಿಕ ಸಲಹೆಗಾರರು, ಕಂದಾಯ ಇಲಾಖೆ
11. ಸರ್ಕಾರದ ಅಧೀನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ(ವೆಚ್ಚ-7/8).
12. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಆಪ್ತ ಕಾರ್ಯದರ್ಶಿ
13. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ(ವಿಪತ್ತು ನಿರ್ವಹಣೆ) ಇವರ ಆಪ್ತ ಕಾರ್ಯದರ್ಶಿ
14. ಸರ್ಕಾರದ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ(ಭೂಮಾಪನ, ಸೇ-1 ಮತ್ತು ವಿಶೇಷ ಕೋಶ) ಇವರ ಆಪ್ತ ಸಹಾಯಕರು
15. ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸಮನ್ವಯ)
16. ಶಾ.ರ.ಕ/ಹೆಚ್ಚುವರಿ ಪ್ರತಿ.

ಹೊರಡಿಸಿದೆ
ದಿನಾಂಕ: 14/11/19

## ಅನುಬಂಧ 1

| Schemewise Pensioner Details | | |
|---|---|---|
| **Sl.NO** | **Scheme_Name** | **Total beneficiaries** |
| 1 | Indira Gandhi National Old Age Pension | 1694857 |
| 2 | Widow Pension | 1800560 |
| 3 | Physically Handicapped Pension | 926758 |
| 4 | Sandhya Suraksh Yojane | 2989018 |
| 5 | Manaswini Pension | 135452 |
| 6 | Mythri Pension | 1996 |
| 7 | Pension for Widow of Suicided Farmer | 5260 |
| 8 | Acid Victim Pension | 38 |
| 9 | Endosulphan Pension | 6730 |
| **Total** | | **7560669** |

ಕರ್ನಾಟಕ ಸರ್ಕಾರದ ನಡವಳಿಗಳು

ಕಂದಾಯ ಸಚಿವಾಲಯ

ವಿಷಯ: 2007-08 ನೇ ಸಾಲಿನಿಂದ ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ ಅಡಿಯಲ್ಲಿ ಮಾಸಾಶನ ಮಂಜೂರು ಮಾಡುವ ಬಗ್ಗೆ.

ಓದಲಾಗಿದೆ: ಕಾರ್ಯದರ್ಶಿಗಳು ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಭಾರತ ಸರ್ಕಾರ, ಇವರ ಪತ್ರ ಸಂಖ್ಯೆ #J-11013/I/2007-NSAP, ದಿನಾಂಕ: 23-09-07.

ಪ್ರಸ್ತಾವನೆ:

ಭಾರತ ಸರ್ಕಾರವು, ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ ಯೋಜನೆಯನ್ನು ಈ ಮೊದಲು ಚಾಲ್ತಿಯಲ್ಲಿದ್ದ ರಾಷ್ಟ್ರೀಯ ವೃದ್ಧಾಪ್ಯ ವೇತನದ ನಿಯಮಗಳನ್ನು ಬದಲಿಸಿ ದಿನಾಂಕ 19/11/07 ರಿಂದ ಜಾರಿಗೆ ತಂದಿದೆ. ಇದರಂತೆ ಫಲಾನುಭವಿಗಳು 65 ವರ್ಷ ಹಾಗೂ ಮೇಲ್ಪಟ್ಟ ವಯಸ್ಸುಳ್ಳವರಾಗಿರಬೇಕು ಹಾಗೂ ಅವರ ಆರ್ಥಿಕ ಸ್ಥಿತಿ ಬಡತನ ರೇಖೆಗಿಂತ ಕೆಳಗಿರಬೇಕು. ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳನ್ನು ಗುರುತಿಸುವ ಮಾನದಂಡವನ್ನು 2002ರಂದು ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯಿತಿ ರಾಜ್ ಇಲಾಖೆಯು ನಡೆಸಿದ ಸಮೀಕ್ಷೆಯಂತೆ ನಿಗದಿ ಪಡಿಸಲು ಕೋರಿರುತ್ತಾರೆ. ಈ ಯೋಜನೆ ಅನ್ವಯ ಮಾಸಿಕ ರೂ. 400.00 (ರೂಪಾಯಿ ನಾಲ್ಕು ನೂರುಗಳು ಮಾತ್ರ) ಗಳ ಸಾಮಾಜಿಕ ಭದ್ರತಾ ವೇತನವನ್ನು ನೀಡಲು ಘೋಷಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ.ಕಂ.ಇ.147 ಎಮ್ಎಸ್‌ಟಿ 2007 ಬೆಂಗಳೂರು, ದಿನಾಂಕ :1-12-07**

ರಾಜ್ಯದಲ್ಲಿನ 65 ವರ್ಷಕ್ಕಿಂತ ಮೇಲ್ಪಟ್ಟ ಬಡತನ ರೇಖೆಗಿಂತ ಕೆಳಗಿರುವ ಹಿರಿಯ ಜೀವಗಳಿಗೆ ಅವರ ಬಾಳಿನ ಮುಸ್ಸಂಜೆಯಲ್ಲಿ ಆರ್ಥಿಕ ನೆರವು ನೀಡಿ ಸಮಾಜದ ಮುಖ್ಯ ವಾಹಿನಿಗೆ ತರಲು ಸಾಮಾಜಿಕ ಭದ್ರತಾ ವೇತನವನ್ನು ನೀಡುವ ಯೋಜನೆಗೆ ಸರ್ಕಾರ ಮಂಜೂರಾತಿ ನೀಡಿದೆ.

ಈ ಕೆಳಕಂಡ ವ್ಯಕ್ತಿಗಳು ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ ಯೋಜನೆಯಲ್ಲಿ ಮಾಸಾಶನ ಪಡೆಯಲು ಅರ್ಹರಾಗಿರುತ್ತಾರೆ.

1) 65 ವರ್ಷಕ್ಕಿಂತ ಅಥವಾ ಅದಕ್ಕಿಂತ ಮೇಲ್ಪಟ್ಟ ವ್ಯಕ್ತಿಗಳು (ಗಂಡು ಅಥವಾ ಹೆಣ್ಣು)

2) ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯಿತಿ ರಾಜ್ ಮಂತ್ರಾಲಯವು, ಬಡತನ ರೇಖೆಗಿಂತ ಕೆಳಗಿರುವವರನ್ನು ಗುರುತಿಸಲು ಕುಟುಂಬದ ಶೈಕ್ಷಣಿಕ, ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳ ಬಗ್ಗೆ 13 ಅಂಶಗಳನ್ನು ನಿಗದಿಪಡಿಸಿದೆ. ಪ್ರತಿಯೊಂದು ಅಂಶಕ್ಕೆ 0-4 ಅಂಕಗಳನ್ನು ನಿಗದಿಪಡಿಸಲಾಗಿದೆ. ಅದರಂತೆ 26 ಅಂಕಗಳು ಅಥವಾ ಅದಕ್ಕಿಂತ ಕಡಿಮೆ ಅಂಶಗಳನ್ನು ಪಡೆದ ಕುಟುಂಬಗಳನ್ನು ಬಡತನದ ರೇಖೆಗಿಂತ ಕೆಳಗಿದೆ ಎಂದು ಪರಿಗಣಿಸುವುದು.

3) ಅಂತಹ ವ್ಯಕ್ತಿಯು ವಿಧವಾ ವೇತನ, ಅಂಗವಿಕಲ ವೇತನ, ಸಂಧ್ಯಾ ಸುರಕ್ಷಾ ಯೋಜನೆಯಡಿ ಯಾವುದೇ ತರಹದ ಪಿಂಚಣಿ ಇತ್ಯಾದಿಗಳನ್ನು ಸಾರ್ವಜನಿಕ ಅಥವಾ ಖಾಸಗಿ ಮೂಲಗಳಿಂದ ಪಡೆಯುತ್ತಿರಬಾರದು.

4) ಈ ಯೋಜನೆಯು 19ನೇ ನವೆಂಬರ್ 2007ರಿಂದ ಜಾರಿಗೆ ಬಂದಿದೆ. ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನದಡಿಯಲ್ಲಿ ಮಾಸಾಶನಕ್ಕಾಗಿ ಸಲ್ಲಿಸುವ ಅರ್ಜಿಯು ಗೊತ್ತುಪಡಿಸಿದ ನಮೂನೆಯಲ್ಲಿ ಸಂಬಂಧಪಟ್ಟ ತಹಸೀಲ್ದಾರರಿಗೆ ಸಲ್ಲಿಸತಕ್ಕದ್ದು.

5) ಫಲಾನುಭವಿಗಳಿಗೆ ಗಂಡು ಮಕ್ಕಳು ಇದ್ದರೂ ಸಹ ಅವರುಗಳು ಫಲಾನುಭವಿಗಳನ್ನು ಪೋಷಿಸದೇ ಇದ್ದಲ್ಲಿ ಇವರು ಮಾಸಾಶನ ಪಡೆಯಲು ಅರ್ಹರಾಗಿರುತ್ತಾರೆ.

6) ಈ ಮಾಸಾಶನವನ್ನು ಆಯಾಯ ತಾಲ್ಲೂಕಿನ ತಹಸೀಲ್ದಾರರೇ ಮಂಜೂರು ಮಾಡುವುದು.

7) ಈ ಮಾಸಾಶನವನ್ನು ಫಲಾನುಭವಿಯ ಬ್ಯಾಂಕ್ ಖಾತೆಗೆ ಅಥವಾ ಅಂಚೆ ಕಛೇರಿಯ ಖಾತೆಗೆ ಖಜಾನೆಯಿಂದ ಪ್ರತಿ ತಿಂಗಳು ವರ್ಗಾಯಿಸಲಾಗುವುದು,

8) ಭಾರತ ಚುನಾವಣೆ ಆಯೋಗವು ನೀಡಿರುವ ಮತದಾರರ ಗುರುತಿನ ಚೀಟಿಯಲ್ಲಿರುವ ಜನ್ಮ ದಿನಾಂಕವು ವಯಸ್ಸಿಗೆ ಸಂಬಂಧಿಸಿದ ದಾಖಲೆಯಾಗಿರುತ್ತದೆ.

9) ದಿ:19-11-2007ರಿಂದ ಈ ಮೊದಲು ಜಾರಿಯಲ್ಲಿದ್ದ ರಾಷ್ಟ್ರೀಯ ವೃದ್ಧಾಪ್ಯ ವೇತನದ ಬದಲಾಗಿ ಈ ಯೋಜನೆಯು ಜಾರಿಗೆ ಬಂದಿರುತ್ತದೆ. ಆದುದರಿಂದ ಈ ಮೊದಲು ರಾಷ್ಟ್ರೀಯ ವೃದ್ಧಾಪ್ಯ ವೇತನದ ಫಲಾನುಭವಿಗಳು ಇಂದಿರಾಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನವಡಿ ಮುಂದುವರಿಯುತ್ತಾರೆ.

10) ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2235-60-102-1-01" ವೃದ್ಧಾಪ್ಯ ವೇತನದ ಅಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು.

11) ಈಗಾಗಲೇ ವೃದ್ಧಾಪ್ಯ ವೇತನ ನೀಡುವ ಬಗ್ಗೆ ಈಗಾಗಲೇ ಚಾಲ್ತಿಯಲ್ಲಿರುವ ಇತರೇ ನಿಯಮಗಳನ್ನು ಈ ಯೋಜನೆಗೂ ಅನ್ವಯವಾಗುತ್ತದೆ.

12) ಈ ಯೋಜನೆಯ ಇತರೆ ಸಂಪೂರ್ಣ ರೂಪುರೇಷೆಗಳನ್ನು ನಿಗದಿತ ಅರ್ಜಿ ನಮೂನೆ, ಆದಾಯ ಪ್ರಮಾಣ ಪತ್ರ, ವಯಸ್ಸಿನ ಪ್ರಮಾಣ ಪತ್ರ ಇತ್ಯಾದಿಗಳನ್ನು ನೀಡುವಾಗಿನ ಷರತ್ತುಗಳ ಬಗ್ಗೆ ವಿವರಗಳನ್ನು ಇದಕ್ಕೆ ಲಗತ್ತಿಸಿದ ಆದೇಶದಲ್ಲಿ ನೀಡಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಎಸ್.ಎಮ್.ಜಾಮ್‌ದಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಕಂದಾಯ ಇಲಾಖೆ

ಇವರಿಗೆ.

1. ಮಹಾಲೇಖಪಾಲರು (ಲೆಕ್ಕಪತ್ರ ಮತ್ತು ಲೆಕ್ಕ ತಪಾಸಣೆ) (ಎ.ಮತ್ತು ಇ) ಕರ್ನಾಟಕ, ಬೆಂಗಳೂರು
2. ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಂದಾಯ ಇಲಾಖೆ ಬೆಂಗಳೂರು.
3. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ ವಿಧಾನ ಸೌಧ ಬೆಂಗಳೂರು.
4. ಮಾನ್ಯ ಉಪ ಮುಖ್ಯಮಂತ್ರಿಯವರ ಕಾರ್ಯದರ್ಶಿ. ವಿಧಾನ ಸೌಧ ಬೆಂಗಳೂರು.
5. ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿ. ವಿಧಾನ ಸೌಧ ಬೆಂಗಳೂರು.
6. ಪ್ರಾದೇಶಿಕ ಆಯುಕ್ತರು.ಬೆಂಗಳೂರು/ಮೈಸೂರು/ಬೆಳಗಾವಿ/ಗುಲ್ಬರ್ಗಾ.
7. ಎಲ್ಲಾ ಜಿಲ್ಲಾಧಿಕಾರಿಗಳು.
8. ನಿರ್ದೇಶಕರು.ಖಜಾನೆ ಇಲಾಖೆ.ಬೆಂಗಳೂರು.
9. ಎಲ್ಲ ಜಿಲ್ಲಾ ಖಜಾನೆ ಹಾಗೂ ಉಪ ಖಜಾನೆ ಅಧಿಕಾರಿಗಳು.
10. ಹೆಚ್ಚುವರಿ ಪ್ರತಿ ಮತ್ತು ರಕ್ಷಾ ಕಡತ.

11. ಸಂಖ್ಯೆ ಎಫ್‌ಡಿ (ಎಸ್‌ಪಿಎಲ್) 1449, 84 ದಿನಾಂಕ 2ನೇ ಮಾರ್ಚ್ 1984ರ ಪತ್ರದ ಮೂಲಕ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ

(ಎನ್. ರಂಗಸ್ವಾಮಿ)
ಸರ್ಕಾರದ ಉಪ-ಕಾರ್ಯದರ್ಶಿ
ಸಮಾಜ ಕಲ್ಯಾಣ ಮತ್ತು ಕಾರ್ಮಿಕ ಇಲಾಖೆ

ಪ್ರತಿಗಳು :—ಇವರಿಗೆ

ಮಹಾಲೇಖಪಾಲ, ಕರ್ನಾಟಕ, ಬೆಂಗಳೂರು
ಸರ್ಕಾರದ ಎಲ್ಲಾ ಕಾರ್ಯದರ್ಶಿಗಳು.
ಎಲ್ಲಾ ವಿಭಾಗಾಧಿಕಾರಿಗಳು
ಜಿಲ್ಲೆಗಳ ಎಲ್ಲಾ ಜಿಲ್ಲಾಧಿಕಾರಿಗಳು
ಉಪವಿಭಾಗಗಳ ಎಲ್ಲಾ ಸಹಾಯಕ ಕಮೀಷನರುಗಳು
ಎಲ್ಲ ತಹಶೀಲ್ದಾರರು
ಎಲ್ಲಾ ಜಿಲ್ಲಾ ಖಜಾನೆ ಅಧಿಕಾರಿಗಳು
ಎಲ್ಲಾ ಉಪಖಜಾನೆ ಅಧಿಕಾರಿಗಳು
ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು.
ಮುಖ್ಯ ಕಾರ್ಯದರ್ಶಿಯವರ ಆಪ್ತಕಾರ್ಯದರ್ಶಿ
ಮುಖ್ಯ ಮಂತ್ರಿಯವರ ಅಧೀನ ಕಾರ್ಯದರ್ಶಿ (ii)
ಮುಖ್ಯ ಮಂತ್ರಿಯವರ ಉಪಕಾರ್ಯದರ್ಶಿ
ಆರ್ಥಿಕ ಇಲಾಖೆ (ವೆಚ್ಚ v)
ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು, ಕರ್ನಾಟಕ, ಬೆಂಗಳೂರು.
ಅಡಿಷನಲ್- ಮುಖ್ಯ ಕಾರ್ಯದರ್ಶಿಯವರ ಆಪ್ತಕಾರ್ಯದರ್ಶಿ.
ಅಭಿವೃದ್ಧಿ ಕಮೀಷನರ ಆಪ್ತ ಕಾರ್ಯದರ್ಶಿ.
ಸಮಾಜ ಕಲ್ಯಾಣ ಮತ್ತು ರೇಷ್ಮೆ ಇಲಾಖೆ ಮಂತ್ರಿಗಳ ಆಪ್ತ ಕಾರ್ಯದರ್ಶಿ
ಪತ್ರಿಕಾ ಕಚೇರಿ

# PROCEEDINGS OF THE GOVERNMENT OF KARNATAKA

Sub: Maintenance Allowance to all Physically Handicapped persons - orders issued -

## ORDER NO: SWL 146 PHP 77 BANGALORE, DATED: 7th NOVEMBER 1977.

**READ:**

1. Government Order No:FD (APL) 84 GAP 76 dt.12-04-1977
2. Budget 77-78 speech of the Finance Minister.
3. Letter No: DWC/GIA/HWD/77-78/ dt. 21-06-1977 from the Director of Women & Childrens' Welfare, B'lore.

**PREAMBLE:**

In the Govt. order read at (1) above, orders have been issued to reduce age limit from 60 years to 45 years with effect from 01-04-1976 for the grant of oldage pension in the case of destitutes who are blind and destitutes who are physically handicapped due to loss of use of one or more limbs.

The Finance Minister has announced in the Budget speech for 1977-78 that the physically handicapped persons may be granted pension without any restriction of age, income being below a certain limit and their inability to be benefited by vocational training or by provision of artificial limbs or medhanical aids, applicance and equipments. The question has been examined in all its aspects.

## ORDER

After considering all the aspects, Govt. are pleased to order that Financial Assistance of Rs. 40/- (Rs. Forty Only) per month may be granted to every physically handicapped person in accordance with the Rules detailed in Annexure-I.

2. The Director of Women & Childrens' Welfare is hereby authorised to sanction financial assistance under this scheme

3. A person who receives assistance under this scheme will not, when he reaches the appropriate age, be eligible for old age pension

4. The expenditure on this scheme is debitable to and met during the current financial year from the budget provision under the budget head 288 Social

Security and Welfare - D-2-VII- Scheme for the Physically Handicapped and Disabled Poor".

5. This order issued with the concurrence of the Finance Department vide No" FC 5413/77 dated: 07-11-1977.

By Order and in the name of the Governor of Karnataka

Sd/-

(T. SHARANAPPA)

Under Secretary to Government,

Social Welfare and Labour Department.

## ANNEXURE - I To

## GOVERNMENT ORDER NO. SWL 146 PHP 77, BANGALORE DATED THE 7th NOVEMBER 1977.

## RULES FOR THE GRANT OF FINANCIAL ASSISTANCE TO PHYSICALLY HANDICAPPED PERSONS

1. Under this scheme 'Physically Handicapped Person' means and includes a blind or a deaf person or an orthopaedically handicapped person suffering from leprosy. It does not include persons who are mentally retarded. Unless there is anything repugnant in the subject or context.

(a) 'Blind means:-

(i) total absence of sight.

(ii) visual acquity not exceeding 3/60 or 10/200 (Snellen)

(iii) limitation of the field of vision, subtending an angle of 20 degrees or worse.

(b) 'Deafness' means a condition where the sense of hearing is nonfunctional for the ordinary purpose of life.

Note: Generally a loss of hearing at 70 decibels or above at 500, 1000 or 2000 frequencies will make residual hearing non-functional.

(c) 'Functional Capacity' means the ability to perform physical functions such as walking, running, lifting, pushing, seeing and hearing.

(d) 'Orthopeadic Handicap' means a physical defect or deformity which causes an interference with the functional capacity of the bones, muscles and joints

(e) 'Family' means the individual, his spouse and legitimate children. it includes parents where the individual is a dependent on his parents.

(f) 'Family income' means the income of all the members of the family from all known sources.

2. Every physically handicapped person who has attained the age of sixteen years shall be entitled to the grant of assistance of Rs. 40/- per month, subject to the conditions that:-

(i) he has income of his own.

(ii) his family income from all sources is less than Rs 3600/- per annum.

**Note:**

Scholarship amounts. if any. received by a beneficiary under this scheme for the specific purpose of prosecution of studies shall not be taken into account, while computing the income of the beneficiary's family.

(iii) he is prevented from earnings living either by vocational training or by use of artifical limbs or mechanical aids, appliances and equipments.

(iv) he has resided in Karnataka State for a continuous period of 5 years immediately before applying for assistance.

3. A person who is an inmate in an institution for the Physically Handicapped is not eligible for assistance under this scheme.

4. The applicant shall obtain the certificates prescribed in Rule 2 from the Tahsildar of the taluk in which he resides. Applications for issue of such certificates shall be disposed of by the Tahsildar concerned within a time limit of one month.

5. A certified extract from the register of births, a school leaving certificate issued by the head of an institution in which the physically handicapped person studies last containing information regarding his age or date of birth or an age certificate issued by a Medical Officer not below the rank of a Health Officer-cum-Assistant Surgeon, Class II, shall be admitted as sufficient proof of the age of the applicant

6. A physically handicapped person desirous of applying for assistance shall send his application in the form prescribed in Annexure-II to the Govt. order to the District Probation Officer in charge of the District in which he resides. The Dist. Probation Officer shall satisfy himself regarding the applicants eligibility

for the assistance and forward the application with all the connected documents to the Director of Women and Children's Welfare for sanction of assistance. Where the application is incomplete in any particulars or Where an applicant seeks help in the matter of preparing an application, it shall be the duty of the Dist. Probation Officer concerned to render all reasonable help to the applicant in making his application and in securing the certificate required under Rule.2.

7. The Dist. Probation Officer shall obtain a certificate from the competent Medical officer regarding the physical handicaps of the applicant before he recommends the case to the Director of Women and Children's Welfare.

8. (i) The assistance once granted be valid till the close of the official year during which it is sanctioned or till the death of the applicant whichever is earlier. The assistance shall however be renewed in the subsequent years on production of certificate prescribed in Rule 2 once again.

(ii) The assistance shall cease as soon as the beneficiary leaves this state permanently or continuously for more than three months.

9. Each District Probation Officer shall make in respect of the beneficiaries under the Scheme yearly verification of the fact that the beneficiary is alive and continues to remain eligible for assistance under the Scheme.

10. (i) The application for financial assistance should be disposed of by the District Probation Officer and the Director of Women and Children's Welfare each within a period of one month from the date of the receipt of the application.

(ii) The Director of Women and Children's Welfare should maintain a register of receipients of Government assistance and ensure that renewal orders are issued within 15 days from the date of receipt of certificate mentioned in Rule 2 above.

(iii) The financial assistance should be released through the respective Treasures.

11. No old age assistance shall be sanctioned to any person in receipt of assistance under this scheme.

Sd/-

(T. SHARANAPPA)

Under Secretary to Government.

S.W. & Labour Department.

**<u>ಕರ್ನಾಟಕ ಸರ್ಕಾರದ ನಡವಳಿಗಳು</u>**

**ವಿಷಯ: 2007-08ನೇ ಸಾಲಿನಿಂದ ಸಂಧ್ಯಾ ಸುರಕ್ಷಾ ಯೋಜನೆ ಅಡಿಯಲ್ಲಿ ಮಾಸಾಶನ ಮಂಜೂರು ಮಾಡುವ ಬಗ್ಗೆ.**

ಓದಲಾಗಿದೆ: ಮಾನ್ಯ ಉಪ ಮುಖ್ಯ ಮಂತ್ರಿಗಳು ಮತ್ತು ಹಣಕಾಸು ಸಚಿವರ 2007-08ನೇ ಸಾಲಿನ ಆಯವ್ಯಯದ ಭಾಷಣದ ಘೋಷಣೆ.

*******

**<u>ಪ್ರಸ್ತಾವನೆ:</u>**

2007-08ನೇ ಸಾಲಿನ ಆಯವ್ಯಯ ಭಾಷಣದಲ್ಲಿ 60 ವರ್ಷಕ್ಕಿಂತ ಮೇಲ್ಪಟ್ಟ ಸಣ್ಣ ಮತ್ತು ಅತಿ ಸಣ್ಣ ರೈತರು, ನೇಕಾರರು, ಮೀನುಗಾರರು, ಅಸಂಘಟಿತ ಕಾರ್ಮಿಕರು, ಕೃಷಿ ಕಾರ್ಮಿಕರು ಮುಂತಾದ ಹಿರಿಯ ಜೀವಗಳಿಗೆ ಸಾಮಾಜಿಕ ಭದ್ರತೆ ಒದಗಿಸಲು ಸಂಧ್ಯಾ ಸುರಕ್ಷಾ ಯೋಜನೆಯನ್ನು ಜಾರಿಗೆ ತರಲು ಘೋಷಿಸಲಾಗಿದ್ದು, ಈ ಯೋಜನೆ ಅನ್ವಯ ಮಾಸಿಕ ರೂ.400.00(ರೂಪಾಯಿ ನಾಲ್ಕು ನೂರುಗಳು ಮಾತ್ರ) ಗಳ ಸಾಮಾಜಿಕ ಭದ್ರತಾ ವೇತನವನ್ನು ನೀಡಲು ಯೋಜನೆಯೊಂದನ್ನು ರೂಪಿಸಲಾಗುತ್ತಿದೆ ಎಂದು ಘೋಷಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**<u>ಸರ್ಕಾರದ ಆದೇಶ ಸಂ. ಕಂಇ 97 ಎಂ.ಎಸ್.ಟಿ 2007, ಬೆಂಗಳೂರು, ದಿನಾಂಕ 2/7/2007.</u>**

ರಾಜ್ಯದಲ್ಲಿನ 65 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನ ಹಿರಿಯ ಜೀವಗಳಿಗೆ ಅವರ ಬಾಳಿನ ಮುಸ್ಸಂಜೆಯಲ್ಲಿ ಆರ್ಥಿಕ ಸಂಕಷ್ಟಕ್ಕೆ ಈಡಾಗುವುದು ನೋವಿನ ಸಂಗತಿಯಾಗಿರುತ್ತದೆ. ಅಂತಹವರಿಗೆ ಹಣಕಾಸಿನ ಅವಶ್ಯಕತೆ ಇದ್ದು ಮಾಸಿಕ ರೂ. 400/-(ರೂಪಾಯಿ ನಾಲ್ಕು ನೂರುಗಳು ಮಾತ್ರ)ಗಳ ಸಾಮಾಜಿಕ ಭದ್ರತಾ ವೇತನವನ್ನು ನೀಡುವ ಯೋಜನೆಗೆ ಸರ್ಕಾರ ಮಂಜೂರಾತಿ ನೀಡಿದೆ.

ಈ ಕೆಳಕಂಡ ವ್ಯಕ್ತಿಗಳು ಸಂಧ್ಯಾ ಸುರಕ್ಷಾ ಯೋಜನೆಯಲ್ಲಿ ಮಾಶಾಸನ ಪಡೆಯಲು ಅರ್ಹರಾಗಿರುತ್ತಾರೆ.

1. ಕೃಷಿ ಕಾರ್ಮಿಕರು,
2. ಅತಿ ಸಣ್ಣ ರೈತರು,
3. ಸಣ್ಣ ರೈತರು,
4. ನೇಕಾರರು,
5. ಮೀನುಗಾರರು,
6. ಅಸಂಘಟಿತ ವಲಯದ ಕಾರ್ಮಿಕರು ಮುಂತಾದವರು.

1. ಉದ್ದೇಶಿತ ಫಲಾನುಭವಿಯ ಪತಿ ಅಥವಾ ಪತ್ನಿಯ ಒಟ್ಟು ವಾರ್ಷಿಕ ಸಂಯೋಜಿತ ಆದಾಯ ಸ್ಥಳೀಯ ಕಂದಾಯ ಅಧಿಕಾರಿಗಳು ಪ್ರಮಾಣೀಕರಿಸುವಂತೆ 20,000ರೂಗಳಿಗಿಂತ ಹೆಚ್ಚಿಗೆ ಇರಕೂಡದು
2. ಫಲಾನುಭವಿಗಳ ಪತಿ ಅಥವಾ ಪತ್ನಿಯ ಸಂಯೋಜಿತ ಠೇವಣಿ ಮೌಲ್ಯ ರೂ. 10,000ಗಳಿಗಿಂತ ಹೆಚ್ಚಿಗೆ ಇರಬಾರದು.
3. ಅಂತಹ ವ್ಯಕ್ತಿಯು ವೃದ್ಧಾಪ್ಯ ವೇತನ,ವಿಧವಾ ವೇತನ,ಅಂಗವಿಕಲ ವೇತನ, ನಿರ್ಗತಿಕ ವಿಧವಾ ವೇತನ ಇಲ್ಲದೆ ಯಾವುದೇ ತರಹದ ಪಿಂಚಣಿ ಇತ್ಯಾದಿಗಳನ್ನು ಸಾರ್ವಜನಿಕ ಅಥವಾ ಖಾಸಗಿ ಮೂಲಗಳಿಂದ ಪಡೆಯುತ್ತಿರಬಾರದು.
4. ಈ ಯೋಜನೆಯು 29ನೇ ಜುಲೈ 2007ರಿಂದ ಜಾರಿಗೆ ಬರುತ್ತದೆ. ಸಂಧ್ಯಾ ಸುರಕ್ಷಾ ಯೋಜನೆ ಅಡಿಯಲ್ಲಿ ಮಾಸಾಶನಕ್ಕಾಗಿ ಸಲ್ಲಿಸುವ ಅರ್ಜಿಯು ಗೊತ್ತುಪಡಿಸಿದ ನಮೂನೆಯಲ್ಲಿ

ಸಂಬಂಧಪಟ್ಟ ತಹಶೀಲ್ದಾರರಿಗೆ ಸಲ್ಲಿಸತಕ್ಕದು.

5. ಫಲಾನುಭವಿಗಳಿಗೆ ಗಂಡು ಮಕ್ಕಳು ಇದ್ದರೂ ಸಹ ಇವರುಗಳು ಫಲಾನುಭವಿಗಳನ್ನು ಘೋಷಿಸದೇ ಇದ್ದಲ್ಲಿ ಇವರು ಮಾಶಾಸನ ಪಡೆಯಲು ಅರ್ಹರಾಗಿರುತ್ತಾರೆ.
6. ಈ ಮಾಶಾಸನವನ್ನು ಆಯಾಯ ತಾಲ್ಲೂಕಿನ ತಹಶೀಲ್ದಾರರೇ ಮಂಜೂರು ಮಾಡುವುದು.
7. ಈ ಮಾಶಾಸನವನ್ನು ಫಲಾನುಭವಿಯ ಬ್ಯಾಂಕ್ ಖಾತೆಗೆ ಇಲ್ಲವೇ ನೇರವಾಗಿ ಖಜಾನೆಯಿಂದ ಅಂಚೆ ಕಛೇರಿಯ ಖಾತೆಗೆ ಪ್ರತಿ ತಿಂಗಳು ವರ್ಗಾಯಿಸಲಾಗುವುದು.
8. ಭಾರತ ಚುನಾವಣಾ ಆಯೋಗವು ನೀಡಿರುವ ಮತದಾರರ ಗುರುತಿನ ಚೀಟಿಯಲ್ಲಿರುವ ಜನ್ಮ ದಿನಾಂಕವು ವಯಸ್ಸಿಗೆ ಸಂಬಂಧಿಸಿದ ದಾಖಲೆಯಾಗಿರುತ್ತದೆ.
9. ಕರ್ನಾಟಕದಲ್ಲಿ ಸಂಧ್ಯಾ ಸುರಕ್ಷಾ ಯೋಜನೆ ಅಡಿಯಲ್ಲಿ ಮಾಸಾಶನ ನೀಡುವಂತೆ ಸಂಬಂಧಿಸಿದ ನಿಯಮಗಳನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ '2235-60-001-0-02-059 'ಇತರೆ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.ಎಫ್ ಡಿ 579 ವೆಚ್ಚ-7/07, ದಿನಾಂಕ 19.6.2007 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

Jamdar

(ಎಸ್. ಎಂ. ಜಾಮ್‌ದಾರ್)
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

ಇವರಿಗೆ:

1. ಮಹಾಲೇಖಪಾಲರು (ಲೆಕ್ಕಪತ್ರ ಮತ್ತು ಲೆಕ್ಕ ತಪಾಸಣೆ) ( ಎ ಮತ್ತು ಇ), ಕರ್ನಾಟಕ, ಬೆಂಗಳೂರು.
2. ಮಾನ್ಯ ಮುಖ್ಯ ಮಂತ್ರಿಯವರ ಪ್ರಧಾನ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು,
3. ಮಾನ್ಯ ಉಪಮುಖ್ಯ ಮಂತ್ರಿಯವರ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು,
4. ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು,
5. ಪ್ರಾದೇಶಿಕ ಆಯುಕ್ತರು,ಬೆಂಗಳೂರು/ಮೈಸೂರು/ಬೆಳಗಾವಿ/ಗುಲ್ಬರ್ಗಾ.
6. ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು.
7. ನಿರ್ದೇಶಕರು, ಯೋಜನಾ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು.
8. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು,
9. ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು ಕಂದಾಯ ಇಲಾಖೆ, ಬೆಂಗಳೂರು.
10. ರಾಜ್ಯದ ಎಲ್ಲಾ ಉಪ ವಿಭಾಗಾಧಿಕಾರಿಗಳು.
11. ರಾಜ್ಯದ ಎಲ್ಲಾ ತಾಲ್ಲೂಕಿನ ತಹಶೀಲ್ದಾರರು,
12. ರಾಜ್ಯದ ಎಲ್ಲಾ ಜಿಲ್ಲಾ ಖಜಾನೆ ಹಾಗೂ ಉಪ ಖಜಾನೆ ಅಧಿಕಾರಿಗಳು,
13. ಸರ್ಕಾರದ ಆಂತರಿಕ ಆರ್ಥಿಕ ಸಲಹೆಗಾರರು, ಕಂದಾಯ ಇಲಾಖೆ, ಬೆಂಗಳೂರು.
14. ಹಿರಿಯ ಲೆಕ್ಕ ಪರಿಶೋಧನಾಧಿಕಾರಿಗಳು, ಕಂದಾಯ ಇಲಾಖೆ, ಬೆಂಗಳೂರು.
11. ಹೆಚ್ಚುವರಿ ಪ್ರತಿ ಮತ್ತು ರಕ್ಷಾ ಕಡತ.

US LREV

# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಬಡತನ ರೇಖೆಗಿಂತ ಕೆಳಗಿರುವ ಅವಿವಾಹಿತ ಹಾಗೂ ವಿಚ್ಛೇದಿತ ಮಹಿಳೆಯರಿಗೆ ಮಾಸಾಶನ ನೀಡುವ "ಮನಸ್ವಿನಿ" ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:** 2013-14 ನೇ ಸಾಲಿನ ಅಯವ್ಯಯ ಭಾಷಣದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಅವಿವಾಹಿತ ಹಾಗೂ ವಿಚ್ಛೇದಿತ ಮಹಿಳೆಯರಿಗೆ ರೂ.500 ಗಳ ಮಾಸಾಶನದ ಘೋಷಣೆ.

**ಪ್ರಸ್ತಾವನೆ:**

ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಸಂಕಷ್ಟದಲ್ಲಿರುವ ಅವಿವಾಹಿತ ಹಾಗೂ ವಿಚ್ಛೇದಿತ ಮಹಿಳೆಯರಿಗೆ ಆರ್ಥಿಕ ಭದ್ರತೆಯನ್ನೊದಗಿಸಿ, ಸಹಾಯ ನೀಡುವ ಉದ್ದೇಶದಿಂದ, ಬಡತನ ರೇಖೆಗಿಂತ ಕೆಳಗಿರುವ 40 ರಿಂದ 64 ವರ್ಷದೊಳಗಿರುವ ಅವಿವಾಹಿತ ಹಾಗೂ ವಿಚ್ಛೇದಿತ ಮಹಿಳೆಯರಿಗೆ ರೂ.500ಗಳ ಮಾಸಾಶನ ನೀಡಲು "ಮನಸ್ವಿನಿ" ಯೋಜನೆಯನ್ನು ಸರ್ಕಾರ 2013-14 ನೇ ಸಾಲಿನ ಅಯವ್ಯಯದಲ್ಲಿ ಘೋಷಿಸಿದೆ. 65ಕ್ಕಿಂತ ಹೆಚ್ಚು ವಯಸ್ಸಾದ ಅವಿವಾಹಿತ ಹಾಗೂ ವಿಚ್ಛೇದಿತ ಮಹಿಳೆಯರು ಇಂದಿರಾಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ಯೋಜನೆಯಡಿ ಪ್ರಯೋಜನ ಪಡೆಯಬಹುದಾಗಿರುತ್ತದೆ. ಈ ಹಿನ್ನಲೆಯಲ್ಲಿ ಕೆಳಕಂಡ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 94 ಡಿಎಸ್‌ಪಿ 2013, ಬೆಂಗಳೂರು.**
**ದಿನಾಂಕ:01/08/2013.**

ರಾಜ್ಯದಲ್ಲಿನ ಬಡತನ ರೇಖೆಗಿಂತ ಕೆಳಗಿರುವ 40 ರಿಂದ 64 ವರ್ಷದೊಳಗಿರುವ ಅವಿವಾಹಿತ ಹಾಗೂ ವಿಚ್ಛೇದಿತ ಮಹಿಳೆಯರಿಗೆ ಆರ್ಥಿಕ ಸಹಾಯವನ್ನು ಒದಗಿಸಿ ಸಮಾಜದ ಮುಖ್ಯವಾಹಿನಿಗೆ ತರುವ ದೃಷ್ಟಿಯಿಂದ ರೂ.500ಗಳ ಮಾಸಾಶನ ನೀಡಲು "ಮನಸ್ವನಿ" ಯೋಜನೆಯನ್ನು ದಿನಾಂಕ:01-08-2013ರಿಂದ ಜಾರಿಗೆ ತಂದು ಆದೇಶಿಸಿದೆ.

1. ಉದ್ದೇಶಿತ ಫಲಾನುಭವಿಯ ಆದಾಯ ಗ್ರಾಮೀಣ ಪ್ರದೇಶಗಳಲ್ಲಿ ರೂ.12,000 ಗಳಿಗಿಂತ ಅಥವಾ ನಗರ ಪ್ರದೇಶಗಳಲ್ಲಿ ರೂ.17,000 ಗಳಿಗಿಂತ ಕಡಿಮೆ ಇರತಕ್ಕದ್ದು.
2. ಇತರೇ ಯವುದೇ ಸಾಮಾಜಿಕ ಭದ್ರತಾ ಯೋಜನೆಗಳಡಿ ಅಥವಾ ಯಾವುದೇ ಕುಟುಂಬ ಪಿಂಚಣಿ ಇತ್ಯಾದಿಗಳನ್ನು ಸಾರ್ವಜನಿಕ ಅಥವಾ ಖಾಸಗಿ ಮೂಲಗಳಿಂದ ಪಡೆಯುತ್ತಿರಬಾರದು.
3. ಈ ಮಾಸಾಶನವನ್ನು ಅಯಾ ಹೋಬಳಿಯ ಉಪ ತಹಸೀಲ್ದಾರರು/ತಾಲ್ಲೂಕಿನ ತಹಸೀಲ್ದಾರರು ಅರ್ಹ ಫಲಾನುಭವಿಗಳಿಗೆ ಮಂಜೂರು ಮಾಡುವುದು.
4. ಈ ಮಾಸಾಶನವನ್ನು ಫಲಾನುಭವಿಯ ಬ್ಯಾಂಕ್ ಖಾತೆಗೆ ಅಥವಾ ಅಂಚೆ ಕಚೇರಿಯ ಖಾತೆಗೆ ಖಜಾನೆಯಿಂದ ಪ್ರತಿ ತಿಂಗಳು ವರ್ಗಾಯಿಸಲಾಗುವುದು.
5. ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ"2235-60-102-1-01" ವಿಧವಾ ವೇತನದಡಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು.
6. ಫಲಾನುಭವಿಗಳು ವಿವಾಹವಾದಲ್ಲಿ/ಮರುವಿವಾಹವಾದಲ್ಲಿ, ಉದ್ಯೋಗ ಪಡೆದು ನಿಗದಿತ ಆದಾಯ ಮಿತಿಯನ್ನು ಮೀರಿದಲ್ಲಿ ಹಾಗೂ ಮರಣ ಹೊಂದಿದ ಪಕ್ಷದಲ್ಲಿ ವೇತನವನ್ನು ರದ್ದು ಮಾಡಲಾಗುವುದು.



F-2

7. ಈ ಯೋಜನೆಯ ಇತರೆ ಸಂಪೂರ್ಣ ರೂಪುರೇಶೆಗಳು ನಿಗದಿತ ಅಜಿ ನಮೂನೆ ಹಾಗೂ ಮಂಜೂರಾತಿ ನೀಡುವ ವಿಧಿವಿಧಾನಗಳನ್ನು ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ನೀಡಲಾಗಿದೆ.

ಕರ್ನಾಟಕರಾಜ್ಯಪಾಲರಅಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಲತಾ ಜಿ ಕೃಷ್ಣರಾವ್)
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕಂದಾಯ ಇಲಾಖೆ

ಇವರಿಗೆ: ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು. ಇವರಿಗೆ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ 500 ಪ್ರತಿಗಳನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯಕ್ಕೆ ಕಳುಹಿಸಬೇಕೆಂದು ಕೋರಿದೆ.

ಪ್ರತಿಯನ್ನು:

1. ಮಹಾಲೇಖಪಾಲರು (ಲೆಕ್ಕಪತ್ರ ಮತ್ತು ಲೆಕ್ಕ ತಪಾಸಣೆ)(ಎ ಮತ್ತು ಇ) ಕರ್ನಾಟಕ, ಬೆಂಗಳೂರು.
2. ಮುಖ್ಯ ಕಾರ್ಯದರ್ಶಿಗಳವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3. ಮಾನ್ಯ ಮುಖ್ಯ ಮಂತ್ರಿಗಳವರ ಪ್ರಧಾನ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
4. ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
5. ವಿಭಾಗೀಯ ವ್ಯವಸ್ಥಾಪಕರು, ಭಾರತೀಯ ಜೀವ ವಿಮಾ ನಿಗಮ, ಪಿ&ಜಿಎಸ್ ಯುನಿಟ್, 4ನೇ ಮಹಡಿ, ಜೆ.ಸಿ. ರೋಡ್, ಬೆಂಗಳೂರು-02.
6. ಪ್ರಾದೇಶಿಕ ಆಯುಕ್ತರು, ಬೆಂಗಳೂರು/ಬೆಳಗಾವಿ/ಮೈಸೂರು/ಗುಲ್ಬರ್ಗಾ.
7. ಎಲ್ಲಾ ಜಿಲ್ಲಾಧಿಕಾರಿಗಳು.
8. ಸರ್ಕಾರದ ಅಧೀನ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಬೆಂಗಳೂರು.
9. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು.
10. ಸಂಬಂಧಪಟ್ಟ ಉಪ ವಿಭಾಗಧಿಕಾರಿಗಳು/ತಹಸೀಲ್ದಾರರುಗಳಿಗೆ.
11. ಎಲ್ಲಾ ಜಿಲ್ಲಾ ಖಜಾನೆ ಹಾಗೂ ಉಪ ಖಜಾನೆ ಅಧಿಕಾರಿಗಳು.
12. ಹೆಚ್ಚುವರಿ ಪ್ರತಿ ಮತ್ತು ರಕ್ಷಾ ಕಡತ.

# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಬಡತನ ರೇಖೆಗಿಂತ ಕೆಳಗಿರುವ ಲಿಂಗತ್ವ ಅಲ್ಪಸಂಖ್ಯಾತರಿಗೆ ಮಾಸಾಶನ ನೀಡುವ "ಮೈತ್ರಿ" ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

ಓದಲಾಗಿದೆ: 1. 2013–14 ನೇ ಸಾಲಿನ ಅಯವ್ಯಯ ಭಾಷಣದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಲಿಂಗತ್ವ ಅಲ್ಪಸಂಖ್ಯಾತರಿಗೆ ರೂ.500 ಗಳ ಮಾಸಾಶನದ ಘೋಷಣೆ.

2. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸುತ್ತೋಲೆ ಸಂಖ್ಯೆ: ಮಮಇ 11 ಮಅನಿ 2013 ದಿನಾಂಕ: 29–07–2013

**ಪ್ರಸ್ತಾವನೆ:**

ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಸಂಕಷ್ಟದಲ್ಲಿರುವ ಲಿಂಗತ್ವ ಅಲ್ಪಸಂಖ್ಯಾತರಿಗೆ (ಹಿಜ್ರಾಗಳು, ಕೋಥಿಗಳು, ಜೋಗಪ್ಪಂದಿರು/ಎಫ್‌ಟುಎಂ/ಎಂಟುಎಫ್/ಮಂಗಳಮುಖಿಯರು) ಸಹಾಯ ನೀಡುವ ಉದ್ದೇಶದಿಂದ, ಬಡತನ ರೇಖೆಗಿಂತ ಕೆಳಗಿರುವ 40 ರಿಂದ 64 ವರ್ಷದೊಳಗಿರುವ ಲಿಂಗತ್ವ ಅಲ್ಪಸಂಖ್ಯಾತರಿಗೆ ರೂ.500ಗಳ ಮಾಸಾಶನ ನೀಡಲು "ಮೈತ್ರಿ" ಯೋಜನೆಯನ್ನು ಸರ್ಕಾರ 2013–14 ನೇ ಸಾಲಿನ ಅಯವ್ಯಯದಲ್ಲಿ ಘೋಷಿಸಿದೆ. 65ಕ್ಕಿಂತ ಹೆಚ್ಚು ವಯಸ್ಸಾದ ಲಿಂಗತ್ವ ಅಲ್ಪಸಂಖ್ಯಾತರು ಇಂದಿರಾಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ಯೋಜನೆಯಡಿ ಪ್ರಯೋಜನ ಪಡೆಯಬಹುದಾಗಿರುತ್ತದೆ. ಮುಂದುವರೆದು, ಮೇಲೆ ಓದಲಾದ ಉಲ್ಲೇಖ(2) ರನ್ವಯ, ಲಿಂಗತ್ವ ಅಲ್ಪಸಂಖ್ಯಾತರನ್ನು ಗುರುತಿಸುವ ಬಗ್ಗೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಹೊರಡಿಸಿರುವ ಸುತ್ತೋಲೆಯನ್ನು ಆಧರಿಸಿ ಲಿಂಗತ್ವ ಅಲ್ಪಸಂಖ್ಯಾತರನ್ನು ಗುರುತಿಸಲು ಸರ್ಕಾರ ತೀರ್ಮಾನಿಸಿರುವ ಹಿನ್ನಲೆಯಲ್ಲಿ ಕೆಳಕಂಡ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 95 ಡಿಎಸ್‌ಪಿ 2013, ಬೆಂಗಳೂರು.**
**ದಿನಾಂಕ:01/08/2013.**

ರಾಜ್ಯದಲ್ಲಿನ ಬಡತನ ರೇಖೆಗಿಂತ ಕೆಳಗಿರುವ 40 ರಿಂದ 64 ವರ್ಷದೊಳಗಿರುವ ಲಿಂಗತ್ವ ಅಲ್ಪಸಂಖ್ಯಾತರಿಗೆ(ಹಿಜ್ರಾಗಳು,ಕೋಥಿಗಳು,ಜೋಗಪ್ಪಂದಿರು,/ಎಫ್‌ಟುಎಂ/ಎಂಟುಎಫ್/ಮಂಗಳಮುಖಿಯರು)- ಆರ್ಥಿಕ ಸಹಾಯವನ್ನು ಒದಗಿಸಿ ಸಮಾಜದ ಮುಖ್ಯವಾಹಿನಿಗೆ ತರುವ ದೃಷ್ಟಿಯಿಂದ ರೂ.500ಗಳ ಮಾಸಾಶನ ನೀಡಲು "ಮೈತ್ರಿ" ಯೋಜನೆಯನ್ನು ದಿನಾಂಕ:01–08–2013ರಿಂದ ಜಾರಿಗೆ ತಂದು ಆದೇಶಿಸಿದೆ.

1. ಉದ್ದೇಶಿತ ಫಲಾನುಭವಿಯ ಆದಾಯ ಗ್ರಾಮೀಣ ಪ್ರದೇಶಗಳಲ್ಲಿ ರೂ.12,000 ಗಳಿಗಿಂತ ಅಥವಾ ನಗರ ಪ್ರದೇಶಗಳಲ್ಲಿ ರೂ.17,000 ಗಳಿಗಿಂತ ಕಡಿಮೆ ಇರತಕ್ಕದ್ದು.
2. ಉದ್ದೇಶಿತ ಫಲಾನುಭವಿಯು ಲಿಂಗತ್ವ ಅಲ್ಪ ಸಂಖ್ಯಾತರೆಂದು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸುತ್ತೋಲೆ ಸಂಖ್ಯೆ:ಮಮಇ 11 ಮಅನಿ 2013, ದಿನಾಂಕ:29–07–2013ರಂತೆ ಗುರುತಿಸತಕ್ಕದ್ದು. ಅದರಂತೆ ಲಿಂಗತ್ವ ಅಲ್ಪಸಂಖ್ಯಾತರುಗಳನ್ನು, ಆರೋಗ್ಯ ಕುಟುಂಬ ಮತ್ತು ಕಲ್ಯಾಣ ಇಲಾಖೆಯಿಂದ ಲಿಂಗತ್ವ ದೃಡೀಕರಣ ಪ್ರಮಾಣ ಪತ್ರವನ್ನು ಪಡೆಯಲು ಇವರುಗಳು ಎದುರಿಸಬಹುದಾದ ತೊಂದರೆಗಳನ್ನು ನಿವಾರಿಸಲು, ಲಿಂಗತ್ವ ಅಲ್ಪ ಸಂಖ್ಯಾತರುಗಳು "ನಿರ್ವಾಣ್" ಆಗಿದ್ದಲ್ಲಿ ಮಾತ್ರ ಲಿಂಗತ್ವವನ್ನು ಗುರುತಿಸಲು ಸಾಧ್ಯವೆಂದು ಹಾಗೂ ವೈದ್ಯರು ಸಹ ಪ್ರಮಾಣ ಪತ್ರ ನೀಡಲು ಸಹಕಾರಿಯಾಗುತ್ತದೆ. ಆದರೆ, "ನಿರ್ವಾಣ್" ಆಗದವರಿಗೆ ವೈದ್ಯಕೀಯ ಪ್ರಮಾಣ ಪತ್ರ ನೀಡಲು ಸಾಧ್ಯವಾಗುತ್ತಿಲ್ಲವೆಂಬುದನ್ನು ಸರ್ಕಾರವು ಮನಗಂಡು, ಲಿಂಗತ್ವ ಅಲ್ಪಸಂಖ್ಯಾತರಲ್ಲರಿಗೂ



M-1

ಸಮಾನ ದೃಷ್ಟಿಯಿಂದ ಸರ್ಕಾರದ ಸವಲತ್ತು ದಕ್ಕಿಸುವಂತಾಗಲು ಸಮುದಾಯ ಆಧಾರಿತ ಸಂಸ್ಥೆಗಳಾದ "ಸಂಗಮ" ಮತ್ತು "ಕೆ.ಎಸ್.ಎಂ.ಎಫ್" ಸಂಸ್ಥೆಗಳು ನೋಂದಾಯಿತ ಸದಸ್ಯತ್ವವನ್ನು ಅಫಿಡವಿಟ್ ಮೂಲಕ ಪ್ರಮಾಣೀಕರಿಸಿ ಗುರುತಿಸಿಕೊಳ್ಳತಕ್ಕದ್ದು.

3. ಇತರೇ ಯವುದೇ ಸಾಮಾಜಿಕ ಭದ್ರತಾ ಯೋಜನೆಗಳಡಿ ಅಥವಾ ಯಾವುದೇ ತರಹದ ಪಿಂಚಣಿ ಇತ್ಯಾದಿಗಳನ್ನು ಸಾರ್ವಜನಿಕ ಅಥವಾ ಖಾಸಗಿ ಮೂಲಗಳಿಂದ ಪಡೆಯುತ್ತಿರಬಾರದು.
4. ಈ ಮಾಸಾಶನವನ್ನು ಅಯಾ ಹೋಬಳಿಯ ಉಪ ತಹಸೀಲ್ದಾರರು/ತಾಲ್ಲೂಕಿನ ತಹಸೀಲ್ದಾರರು ಅರ್ಹ ಫಲಾನುಭವಿಗಳಿಗೆ ಮಂಜೂರು ಮಾಡುವುದು.
5. ಈ ಮಾಸಾಶನವನ್ನು ಫಲಾನುಭವಿಯ ಬ್ಯಾಂಕ್ ಖಾತೆಗೆ ಅಥವಾ ಅಂಚೆ ಕಚೇರಿಯ ಖಾತೆಗೆ ಖಜಾನೆಯಿಂದ ಪ್ರತಿ ತಿಂಗಳು ವರ್ಗಾಯಿಸಲಾಗುವುದು.
6. ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2235-02-101-0-20" ಅಂಗವಿಕಲ ವೇತನದಡಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು.
7. ಈ ಯೋಜನೆಯ ಇತರೆ ಸಂಪೂರ್ಣ ರೂಪುರೇಶೆಗಳು ನಿಗದಿತ ಅರ್ಜಿ ನಮೂನೆ ಹಾಗೂ ಮಂಜೂರಾತಿ ನೀಡುವ ವಿಧಿವಿಧಾನಗಳನ್ನು ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಲತಾ ಜಿ ಕೃಷ್ಣರಾವ್)
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕಂದಾಯ ಇಲಾಖೆ

**ಇವರಿಗೆ:** ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು; ಇವರಿಗೆ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ 500 ಪ್ರತಿಗಳನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯಕ್ಕೆ ಕಳುಹಿಸಬೇಕೆಂದು ಕೋರಿದೆ.

**ಪ್ರತಿಯನ್ನು:**

1. ಮಹಾಲೇಖಪಾಲರು (ಲೆಕ್ಕಪತ್ರ ಮತ್ತು ಲೆಕ್ಕ ತಪಾಸಣೆ)(ಎ ಮತ್ತು ಇ) ಕರ್ನಾಟಕ, ಬೆಂಗಳೂರು.
2. ಮುಖ್ಯ ಕಾರ್ಯದರ್ಶಿಗಳವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3. ಮಾನ್ಯ ಮುಖ್ಯ ಮಂತ್ರಿಗಳವರ ಪ್ರಧಾನ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
4. ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
5. ವಿಭಾಗೀಯ ವ್ಯವಸ್ಥಾಪಕರು, ಭಾರತೀಯ ಜೀವ ವಿಮಾ ನಿಗಮ, ಪಿ&ಜಿಎಸ್ ಯುನಿಟ್, 4ನೇ ಮಹಡಿ, ಜೆ.ಸಿ. ರೋಡ್, ಬೆಂಗಳೂರು-02.
6. ಪ್ರಾದೇಶಿಕ ಆಯುಕ್ತರು, ಬೆಂಗಳೂರು/ಬೆಳಗಾವಿ/ಮೈಸೂರು/ಗುಲ್ಬರ್ಗಾ.
7. ಎಲ್ಲಾ ಜಿಲ್ಲಾಧಿಕಾರಿಗಳು.
8. ಸರ್ಕಾರದ ಅಧೀನ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಬೆಂಗಳೂರು.
9. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು.
10. ಸಂಬಂಧಪಟ್ಟ ಉಪ ವಿಭಾಗಧಿಕಾರಿಗಳು/ತಹಸೀಲ್ದಾರರುಗಳಿಗೆ.
11. ಎಲ್ಲಾ ಜಿಲ್ಲಾ ಖಜಾನೆ ಹಾಗೂ ಉಪ ಖಜಾನೆ ಅಧಿಕಾರಿಗಳು.
12. ಹೆಚ್ಚುವರಿ ಪ್ರತಿ ಮತ್ತು ರಕ್ಷಾ ಕಡತ.

<u>ಕರ್ನಾಟಕ ಸರ್ಕಾರದ ನಡವಳಿಗಳು</u>

**ವಿಷಯ :** ಸಾಲ ಭಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತರಿಗೆ ಮಾಸಿಕ ಪಿಂಚಣಿ ನೀಡುವ ಕುರಿತು.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 64 ಡಿಎಸ್‌ಪಿ 2015, ದಿನಾಂಕ: 13.11.2015.

*****

**<u>ಪ್ರಸ್ತಾವನೆ:</u>**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ, ಸಾಲ ಭಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತ ಪತ್ನಿಗೆ ಮಾಸಿಕ ರೂ.2000/-ಗಳ ವಿಧವಾ ವೇತನ ನೀಡುವ ಯೋಜನೆಯನ್ನು ಜಾರಿಗೆ ತರಲಾಗಿದೆ. ಕೃಷಿ ಇಲಾಖೆಯಿಂದ ಆತ್ಮಹತ್ಯೆ ಪ್ರಕರಣವೆಂದು ಪರಿಗಣಿಸಿ, ಪರಿಹಾರ ಪಡೆದುಕೊಂಡಿರುವ ಪ್ರಕರಣಗಳನ್ನು ಮಾತ್ರ ರೈತ ಪತ್ನಿಗೆ ವಿಧವಾ ವೇತನ ಯೋಜನೆಯಡಿ ಪರಿಗಣಿಸಲಾಗುತ್ತಿದೆ.

ಅರ್ಜಿದಾರರಿಗೆ ತಮ್ಮ ವಾಸಸ್ಥಳ ವ್ಯಾಪ್ತಿಯ ಅಟಲ್‌ಜೀ ಜನಸ್ನೇಹಿ ಕೇಂದ್ರದಲ್ಲಿ ತಂತ್ರಾಂಶದ ಮೂಲಕ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಿದ್ದು, ಅರ್ಜಿ ಸ್ವೀಕೃತಿ, ಪರಿಷ್ಕರಣೆ ಹಾಗೂ ಪಿಂಚಣಿ ಮಂಜೂರಾತಿಗಳಿಗೆ ಸಂಬಂಧಿಸಿದಂತೆ ಅನುಸರಿಸಬೇಕಾದ ಕ್ರಮಗಳ ಕುರಿತು ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ.

ಮುಂದುವರೆದು, ಈ ಯೋಜನೆಯಡಿ ಪಿಂಚಣಿ ಪಡೆಯಲು ಇರುವ ಅರ್ಹತೆಗಳ ಕುರಿತು ಮಾರ್ಗಸೂಚಿಯಲ್ಲಿನ ಕ್ರಮ ಸಂಖ್ಯೆ(5)ರಲ್ಲಿ ಕೆಳಕಂಡಂತೆ ತಿಳಿಸಲಾಗಿದೆ:

> "5. (ಎ) ಉದ್ದೇಶಿತ ಫಲಾನುಭವಿಯು ಸಾಲದ ಭಾದೆಯಿಂದ ಆತ್ಮಹತ್ಯೆ ಮಾಡಿಕೊಂಡು ಮೃತರಾದ ರೈತನ ಪತ್ನಿಯಾಗಿರಬೇಕು.
> (ಬಿ) ಕೃಷಿ ಇಲಾಖೆಯಿಂದ ರೈತರ ಆತ್ಮಹತ್ಯೆ ಪ್ರಕರಣಗಳಡಿ ಗುರುತಿಸಿ ಪರಿಹಾರ ಧನ ಪಡೆದಿರಬೇಕು.
> (ಸಿ) ಇಂದಿರಾಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ, ನಿರ್ಗತಿಕ ವಿಧವಾ ವೇತನ, ಸಂಧ್ಯಾ ಸುರಕ್ಷಾ ಯೋಜನೆ, ದೇವದಾಸಿ ವೇತನ, ಅಂಗವಿಕಲ ವೇತನ ಹಾಗೂ ಇತರೆ ಯಾವುದೇ ಸಾಮಾಜಿಕ ಭದ್ರತಾ ಯೋಜನೆಗಳಡಿ ಮಾಸಾಶನ ಪಡೆಯುತ್ತಿದ್ದಲ್ಲಿ ಈಗಾಗಲೇ ಪಡೆಯುತ್ತಿರುವ ವೇತನದ ರದ್ದತಿಯೊಂದಿಗೆ ಸದರಿ ಯೋಜನೆಯಡಿ ಸೌಲಭ್ಯ ಪಡೆಯಬಹುದಾಗಿರುತ್ತದೆ.
> (ಡಿ) ಅರ್ಜಿದಾರರು ಮರುವಿವಾಹವಾಗಿದ್ದಲ್ಲಿ ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.
> (ಇ) ಅರ್ಜಿದಾರರು ಈಗಾಗಲೇ ಸರ್ಕಾರಿ ಉದ್ಯೋಗ ಪಡೆದಿದ್ದಲ್ಲಿ ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.
> (ಎಫ್) ಫಲಾನುಭವಿಯು ರಾಜ್ಯದ ಯಾವುದೇ ಭಾಗದಲ್ಲಿ ವಾಸವಾಗಿದ್ದರೂ ಮಾಸಾಶನವು ಪ್ರತಿ ತಿಂಗಳಿಗೆ ರೂ.2000/- ಇರುತ್ತದೆ"

ಕೆಲವು ಪ್ರಕರಣಗಳಲ್ಲಿ ಸರ್ಕಾರದಿಂದ ಸೇವಾ ಪಿಂಚಣಿ ಪಡೆಯುತ್ತಿದ್ದು, ಮರಣ ಹೊಂದಿದ ರೈತ ಪತ್ನಿಯು ಈ ಯೋಜನೆಯಡಿ ವಿಧವಾ ವೇತನ ಅರ್ಜಿ ಸಲ್ಲಿಸುತ್ತಿರುವುದು ಕಂಡು ಬಂದಿರುತ್ತದೆ. ಆದ್ದರಿಂದ ಪ್ರಸ್ತಾಪಿತ ಯೋಜನೆಯಲ್ಲಿನ ಮಾರ್ಗಸೂಚಿಯ ಕ್ರಮ ಸಂಖ್ಯೆ 5(ಸಿ)ರಲ್ಲಿ ತಿಳಿಸಲಾಗಿರುವ ಅಂಶವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ:

<u>ಸರ್ಕಾರಿ ಆದೇಶ ಸಂ.ಆರ್‌ಡಿ/64/ಡಿಎಸ್‌ಪಿ/2015, ಬೆಂಗಳೂರು: ದಿನಾಂಕ:17.07.2017</u>

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಸಾಲ ಭಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತ ಪತ್ನಿಗೆ ವಿಧವಾ ಮಾಸಾಶನ ನೀಡುವ ಯೋಜನೆ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 64 ಡಿಎಸ್‌ಪಿ 2015 ದಿನಾಂಕ: 13/11/2015ರೊಂದಿಗೆ ಹೊರಡಿಸಲಾದ ಮಾರ್ಗಸೂಚಿಯಲ್ಲಿನ ಕ್ರಮ

ಸಂಖ್ಯೆ ೨(ಸಿ)ರಲ್ಲಿ "ಇಂದಿರಾಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ, ನಿರ್ಗತಿಕ ವಿಧವಾ ವೇತನ, ಸಂಧ್ಯಾ ಸುರಕ್ಷಾ ಯೋಜನೆ, ದೇವದಾಸಿ ವೇತನ, ಅಂಗವಿಕಲ ವೇತನ ಹಾಗೂ ಇತರೆ ಯಾವುದೇ ಸಾಮಾಜಿಕ ಭದ್ರತಾ ಯೋಜನೆಗಳಡಿ ಮಾಸಾಶನ ಪಡೆಯುತ್ತಿದ್ದಲ್ಲಿ ಈಗಾಗಲೇ ಪಡೆಯುತ್ತಿರುವ ವೇತನದ ರದ್ದತಿಯೊಂದಿಗೆ ಸದರಿ ಯೋಜನೆಯಡಿ ಸೌಲಭ್ಯ ಪಡೆಯಬಹುದಾಗಿರುತ್ತದೆ" ಎಂಬುವುದರ ಜೊತೆಗೆ **"ಇತರೆ ಯಾವುದೇ ಸರ್ಕಾರಿ ಪಿಂಚಣಿಯನ್ನು ಪಡೆಯುತ್ತಿರಬಾರದು"** ಎಂದು ಸೇರ್ಪಡೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಕೆ. ಉಮಾಪತಿ)
ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ,
(ವಿ.ನಿ. ಹಾಗೂ ನೋಂ.&ಮು)

ಇವರಿಗೆ:

ಸಂಕಲನಕಾರರು, ಕರ್ನಾಟಕ ವಿಶೇಷ ರಾಜ್ಯಪತ್ರ, ವಿಕಾಸಸೌಧ, ಬೆಂಗಳೂರು, ಇವರಿಗೆ – ವಿಶೇಷ ರಾಜ್ಯಪತ್ರ ಸಂಚಿಕೆಯಲ್ಲಿ ಪ್ರಕಟಿಸಿ, ಪ್ರಕಟಿತ 100 ಪ್ರತಿಗಳನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಭವನ, ಬೆಂಗಳೂರು ಇವರಿಗೆ ಕಳುಹಿಸಬೇಕೆಂದು ಕೋರಿದೆ.

<u>ಪ್ರತಿ:</u>

1. ಮಹಾಲೇಖಪಾಲರು (ಲೆಕ್ಕಪತ್ರ ಮತ್ತು ಲೆಕ್ಕ ತಪಾಸಣೆ), ಕರ್ನಾಟಕ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನಸೌಧ ಬೆಂಗಳೂರು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬೆಂಗಳೂರು.
4. ಸರ್ಕಾರದ ಕಾರ್ಯದರ್ಶಿಗಳು(ಆಯವ್ಯಯ ಮತ್ತು ಸಂಪನ್ಮೂಲ), ವಿಧಾನಸೌಧ, ಬೆಂಗಳೂರು.
5. ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳು.
6. ಎಲ್ಲಾ ಉಪ ವಿಭಾಗಾಧಿಕಾರಿಗಳು.
7. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು.
8. ಎಲ್ಲಾ ಜಿಲ್ಲೆಯ ಜಿಲ್ಲಾ ಖಜಾನೆ ಹಾಗೂ ಉಪ ಖಜಾನೆ ಅಧಿಕಾರಿಗಳು.
9. ಎಲ್ಲಾ ತಹಸೀಲ್ದಾರ್‌ರುಗಳು
10. ಹೆಚ್ಚುವರಿ ಪ್ರತಿ ಮತ್ತು ರಕ್ಷಾ ಕಡತ.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಆಸಿಡ್ ದಾಳಿಗೊಳಗಾದ ಮಹಿಳೆ /ಹೆಣ್ಣು ಮಕ್ಕಳಿಗೆ ರೂ.3000 ಗಳ ಮಾಸಿಕ ಪಿಂಚಣಿ ನೀಡುವ ಕುರಿತು.

ಓದಲಾಗಿದೆ

1. ಸರ್ಕಾರದ ಆದೇಶ ಸಂಖ್ಯೆ: ಮಮಇ 268 ಮಮಅ 2006, ದಿನಾಂಕ: 27/11/2007.
2. ಸರ್ಕಾರದ ಆದೇಶ ಸಂಖ್ಯೆ: ಮಮಇ 29 ರಾಮಅ 2013, ದಿನಾಂಕ:20.03.2015.
3. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಪ್ರಸ್ತಾವನೆ: ಮಮಇ 29 ರಾಮಅ 2015 ದಿ: 24/08/2015.

ಪ್ರಸ್ತಾವನೆ:

ಮೇಲೆ ಓದಲಾದ ಆದೇಶ (1) ರನ್ವಯ ರಾಜ್ಯ ಸರ್ಕಾರವು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಅಸಿಡ್ ದಾಳಿಗೆ ಒಳಗಾದ ಮಹಿಳೆ ಮತ್ತು ಹೆಣ್ಣು ಮಕ್ಕಳಿಗೆ ಪರಿಹಾರ ಹಾಗೂ ಪುರ್ನವಸತಿ ಕಲ್ಪಿಸುವ ಸುರಕ್ಷಾ ಯೋಜನೆಯಡಿ 2003-04 ಸಾಲಿನಿಂದ ಆಸಿಡ್ ದಾಳಿಗೊಳಗಾದ ಮಹಿಳೆ/ಹೆಣ್ಣು ಮಕ್ಕಳಿಗೆ ರೂ.2.00 ಲಕ್ಷಗಳ ಪರಿಹಾರ ಧನವನ್ನು ನೀಡಲಾಗುತ್ತಿದ್ದು, ಉಲ್ಲೇಖ(2) ಆದೇಶದನ್ವಯ ಸದರಿ ಪರಿಹಾರ ಧನವನ್ನು ರೂ.3.00 ಲಕ್ಷಗಳಿಗೆ ಹೆಚ್ಚಿಸಲಾಗಿರುತ್ತದೆ.

ಮುಂದುವರೆದಂತೆ, ಆಸಿಡ್ ದಾಳಿಗೊಳಗಾದ ಮಹಿಳೆ /ಹೆಣ್ಣು ಮಕ್ಕಳು, ಶೇಕಡಾ 40 ಮತ್ತು ಅದಕ್ಕಿಂತ ಹೆಚ್ಚಿನ ಅಂಗವಿಕಲತೆಗೆ ಒಳಗಾಗಿದ್ದಲ್ಲಿ ಹಾಗೂ ನಗರ ಪ್ರದೇಶದಲ್ಲಿ ರೂ.17,000/- ಹಾಗೂ ಗ್ರಾಮೀಣ ಪ್ರದೇಶದಲ್ಲಿ ರೂ. 12,000/-ಗಳ ಆದಾಯ ಮಿತಿಗೆ ಒಳಪಟ್ಟಿದ್ದಲ್ಲಿ, ಕಂದಾಯ ಇಲಾಖೆಯಡಿ ಜಾರಿಯಲ್ಲಿರುವ ಅಂಗವಿಕಲ ವೇತನ ಯೋಜನೆಯಡಿ ಪಿಂಚಣಿ ಪಡೆಯಬಹುದಾಗಿದೆ. ಆದರೆ ಆಸಿಡ್ ದಾಳಿಗೊಳಗಾದ ಮಹಿಳೆಯರು ಸಮಾಜದ ವಿವಿಧ ಸ್ತರಗಳಲ್ಲಿ ಇರಬಹುದಾದದರಿಂದ ಆಸಿಡ್ ದಾಳಿಗೆ ಒಳಗಾದ ಎಲ್ಲಾ ಮಹಿಳೆಯರಿಗೆ ಜೀವನ ನಿರ್ವಹಣೆಗೆ ಅನುಕೂಲ ಮಾಡಿಕೊಡುವ ಹಾಗೂ ಸಮಾಜದಲ್ಲಿ ಗೌರವಪೂರ್ವಕವಾಗಿ ಬದುಕಲು ಅವಕಾಶ ಕಲ್ಪಿಸುವ ನಿಟ್ಟಿನಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಈಗಾಗಲೇ ಗುರುತಿಸಿರುವ ಆಸಿಡ್ ದಾಳಿಗೊಳಗಾದ ಮಹಿಳೆಯರಿಗೆ ರೂ. 3000.00ಗಳ ಮಾಸಿಕ ಸಹಾಯ ಧನ ನೀಡಲು ಸರ್ಕಾರವು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 149 ಡಿಎಸ್‌ಪಿ 2015, ಬೆಂಗಳೂರು. ದಿನಾಂಕ:19.09.2015

ರಾಜ್ಯದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಅಸಿಡ್ ದಾಳಿಗೆ ಒಳಗಾದ ಮಹಿಳೆ ಮತ್ತು ಹೆಣ್ಣು ಮಕ್ಕಳಿಗೆ ಪರಿಹಾರ ಹಾಗೂ ಪುರ್ನವಸತಿ ಕಲ್ಪಿಸುವ ಸುರಕ್ಷಾ ಯೋಜನೆಯಡಿ ಈಗಾಗಲೇ ಗುರುತಿಸಿರುವ ಆಸಿಡ್ ದಾಳಿಗೊಳಗಾದ ಮಹಿಳೆ/ಹೆಣ್ಣು ಮಕ್ಕಳಿಗೆ ಆರ್ಥಿಕ ಭದ್ರತೆಯನ್ನೊದಗಿಸಿ ಸಮಾಜದಲ್ಲಿ ಗೌರವಪೂರ್ವಕವಾಗಿ ಬದುಕಲು ಅವಕಾಶ ಕಲ್ಪಿಸುವ ದೃಷ್ಟಿಯಿಂದ ರೂ. 3000.00/-(ಮೂರು ಸಾವಿರ ರೂಗಳು ಮಾತ್ರ)ಗಳ ಮಾಸಿಕ ಸಹಾಯಧನ ನೀಡಲು ಆದೇಶಿಸಿದೆ.

ಈ ಯೋಜನೆಯಡಿ ಸೌಲಭ್ಯ ಪಡೆಯಲು ಆದಾಯ ಮಿತಿ ಮತ್ತು ವಯೋಮಿತಿಯನ್ನು ನಿಗದಿಪಡಿಸಿರುವುದಿಲ್ಲ

1. ಉದ್ದೇಶಿತ ಫಲಾನುಭವಿಯು ಈಗಾಗಲೇ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ, ಅಸಿಡ್ ದಾಳಿಗೆ ಒಳಗಾದ ಮಹಿಳೆ ಮತ್ತು ಹೆಣ್ಣು ಮಕ್ಕಳಿಗೆ ಪರಿಹಾರ ಹಾಗೂ ಪುರ್ನವಸತಿ ಕಲ್ಪಿಸುವ ಸುರಕ್ಷಾ ಯೋಜನೆಯಡಿ ಪರಿಹಾರ ಪಡೆದಿರಬೇಕು.
2. ಇತರೆ ಯಾವುದೇ ಸಾಮಾಜಿಕ ಭದ್ರತಾ ಯೋಜನೆಗಳಡಿ ಸೌಲಭ್ಯ ಪಡೆಯುತ್ತಿರಬಾರದು.

3. ಈ ಮಾಸಿಕ ಸಹಾಯಧನವನ್ನು ಅರ್ಜಿದಾರರ ವಾಸಸ್ಥಳ ವ್ಯಾಪ್ತಿಗೆ ಬರುವ ತಹಸೀಲ್ದಾರರು ಮಂಜೂರು ಮಾಡತಕ್ಕದ್ದು.
4. ಈ ಮಾಸಿಕ ಸಹಾಯಧನವನ್ನು ಫಲಾನುಭವಿಯ ಬ್ಯಾಂಕ್ ಖಾತೆಗೆ ಖಜಾನೆಯಿಂದ ಪ್ರತಿ ತಿಂಗಳು ವರ್ಗಾಯಿಸತಕ್ಕದ್ದು.
5. ಫಲಾನುಭವಿಯು ಮರಣ ಹೊಂದಿದ ಪಕ್ಷದಲ್ಲಿ ಮಾಸಿಕ ಸಹಾಯಧನವನ್ನು ರದ್ದುಪಡಿಸಲಾಗುವುದು.
6. ಈ ಯೋಜನೆಯಡಿ ತಗಲುವ ವೆಚ್ಚವನ್ನು 2015–16 ನೇ ಸಾಲಿನಲ್ಲಿ ಅಂಗವಿಕಲ ವೇತನ ಯೋಜನೆಯ ಲೆಕ್ಕ ಶೀರ್ಷಿಕೆಯಡಿ"2235–02–101–0–20–V"ರಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ:19–09–2015ರಂದು ಆರ್ಥಿಕ ಇಲಾಖೆಯು ಕಡತ ಸಂ.ಆರ್‌ಡಿ 149 ಡಿಪಿಎಸ್‌ಪಿ 2015ರ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ
ಹಾಗೂ ಅವರ ಹೆಸರಿನಲ್ಲಿ

(ಎಸ್.ಕಾತ್ಯಾಯಿನಿದೇವಿ), 19/9
ಪೀಠಾಧಿಕಾರಿ
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ
ನಿರ್ದೇಶನಾಲಯ, ಕಂದಾಯ ಇಲಾಖೆ
ಬೆಂಗಳೂರು.

<u>ಇವರಿಗೆ:</u> ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು, ಇವರಿಗೆ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ 500 ಪ್ರತಿಗಳನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯಕ್ಕೆ ಕಳುಹಿಸಬೇಕೆಂದು ಕೋರಿದೆ.

<u>ಪ್ರತಿಯನ್ನು:</u>

1. ಮಹಾಲೇಖಪಾಲರು (ಲೆಕ್ಕಪತ್ರ ಮತ್ತು ಲೆಕ್ಕ ತಪಾಸಣೆ) (ಎ ಮತ್ತು ಇ) ಕರ್ನಾಟಕ, ಬೆಂಗಳೂರು.
2. ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3. ಮಾನ್ಯ ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
4. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
5. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬೆಂಗಳೂರು.
6. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು
7. ಸರ್ಕಾರದ ಕಾರ್ಯದರ್ಶಿಗಳು, (ಆಯವ್ಯಯ ಮತ್ತು ಸಂಪನ್ಮೂಲ) ವಿಧಾನ ಸೌಧ, ಬೆಂಗಳೂರು.
8. ಪ್ರಾದೇಶಿಕ ಆಯುಕ್ತರು, ಬೆಂಗಳೂರು/ಮೈಸೂರು/ಬೆಳಗಾವಿ/ಗುಲ್ಬರ್ಗಾ.
9. ಎಲ್ಲಾ ಜಿಲ್ಲಾಧಿಕಾರಿಗಳು.
10. ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು.
11. ಎಲ್ಲಾ ಉಪ ವಿಭಾಗಧಿಕಾರಿಗಳು/ತಹಸೀಲ್ದಾರರುಗಳಿಗೆ.
12. ಹೆಚ್ಚುವರಿ ಪ್ರತಿ ಮತ್ತು ರಕ್ಷಾ ಕಡತ.



## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ :ಎಂಡೋಸಲ್ಫಾನ್ ಸಂತ್ರಸ್ತರಿಗೆ ಮಾಸಿಕ ಮಿತವೇತನವನ್ನು ಹೆಚ್ಚಿಸುವಕುರಿತು.

ಉಲ್ಲೇಖ :1. ಮಾನ್ಯ ಉಚ್ಚನ್ಯಾಯಾಲಯ, ಬೆಂಗಳೂರು ಇವರರಿಟ್ ಅರ್ಜಿ ಸಂಖ್ಯೆ:41052/2012 ರ ಬಗ್ಗೆ ದಿನಾಂಕ: 27/01/2014ರಂದ ನೀಡಿರುವ ಮಧ್ಯಂತರ ಆದೇಶ.

2. ಮಾನ್ಯ ಉಚ್ಚನ್ಯಾಯಾಲಯ, ಬೆಂಗಳೂರು ಇವರ ರಿಟ್‌ಅರ್ಜಿ ಸಂಖ್ಯೆ:41052/2012 ದಿನಾಂಕ: 02/02/2015.

3. ವಿಧಾನ ಪರಿಷತ್ತಿನ ಭರವಸೆ ಸಮಿತಿ ಸಭೆ ದಿನಾಂಕ: 12/01/2021.

ಪ್ರಸ್ತಾವನೆ :

ಮೇಲೆ (1)ರಲ್ಲಿ ಓದಲಾದ ಮಧ್ಯಂತರ ಆದೇಶದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಕ್ಷಿಣ ಕನ್ನಡ , ಉಡುಪಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಎಂಡೋಸಲ್ಫಾನ್ ಸಿಂಪಡಣೆಯಿಂದ ಶೇ.25 ರಿಂದ ಶೇ.60ರವರೆಗೆ ಅಂಗವಿಕಲತೆ ಹೊಂದಿರುವ ಸಂತ್ರಸ್ತರಿಗೆ ಮಾಸಿಕ ರೂ.1500/-ಗಳು ಹಾಗೂ ಶೇ.60ಕ್ಕಿಂತ ಹೆಚ್ಚಿನಅಂಗವಿಕಲತೆ ಹೊಂದಿರುವ ಸಂತ್ರಸ್ತರಿಗೆ ಮಾಸಿಕ ರೂ.3000/-ಗಳನ್ನು ಸರ್ಕಾರದಿಂದ ಮಾಸಾಶನವಾಗಿ ನೀಡುವಂತೆ ಆದೇಶಿಸಲಾಗಿರುತ್ತದೆ.

ಮುಂದುವರೆದು, ಮೇಲೆ (2)ರಲ್ಲಿ ಓದಲಾದ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಲ್ಲಿ ಎಂಡೋಸಲ್ಫಾನ್ ಪೀಡಿತರಿಗೆ ಶೇಕಡ 100 ರಷ್ಟು ವೈದ್ಯಕೀಯ ಸೌಲಭ್ಯ, ಪುನರ್ವಸತಿ ಹಾಗೂ ಸ್ಟೈಫಂಡ್ ಸೌಲಭ್ಯವನ್ನು ಒದಗಿಸುವಂತೆ ಹಾಗೂ ಸಂತ್ರಸ್ತರಿಗೆ ಮಾಸಿಕ ಮಿತವೇತನವನ್ನು ಏಕಗವಾಕ್ಷಿ ಪದ್ಧತಿ ಮೂಲಕ 01/04/2015 ರಿಂದ ಕಂದಾಯ ಇಲಾಖೆಯ ಮುಖಾಂತರ ವಿತರಿಸಲು ಆದೇಶಿಸಿದಂತೆ, ದಕ್ಷಿಣ ಕನ್ನಡ, ಉಡುಪಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಎಂಡೋಸಲ್ಫಾನ್ ಸಿಂಪಡಣೆಯಿಂದ ಅಂಗವಿಕಲತೆ ಹೊಂದಿರುವ ಸಂತ್ರಸ್ತರಿಗೆ ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದಿಂದ ಖಜಾನೆ ಮೂಲಕ ಮಿತ ವೇತನವನ್ನು ವಿತರಿಸಲಾಗುತ್ತಿದೆ.

ಮುಂದುವರೆದು, ಮೇಲೆ (3)ರಲ್ಲಿ ಓದಲಾದ ವಿಧಾನ ಪರಿಷತ್ತಿನ ಭರವಸೆ ಸಮಿತಿ ಸಭೆಯಲ್ಲಿ ಈ ಮಿತ ವೇತನವನ್ನು ಶೇಕಡಾ 33 ರಷ್ಟು ಹೆಚ್ಚು ಮಾಡಲು ಶಿಫಾರಸ್ಸು ಮಾಡಿದ್ದು, ಈ ಕುರಿತು ಪರಿಶೀಲಿಸಿ, ಹಾಲಿ ನೀಡುತ್ತಿರುವ ರೂ.1500/- ಹಾಗೂ ರೂ.3000/-ಗಳ ಬದಲಿಗೆ ರೂ.2000/- ಹಾಗೂ ರೂ.4000/- ದರದಲ್ಲಿ ಮಿತವೇತನ ವಿತರಿಸುವುದು ಸೂಕ್ತವೆಂಬ ಅಭಿಪ್ರಾಯದೊಂದಿಗೆ ಅಗತ್ಯ ಅನುದಾನ ಕೋರಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿ, ಸಹಮತಿ ಪಡೆಯಲಾಗಿರುತ್ತದೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 184 ಡಿಎಸ್‌ಪಿ 2019 ಬೆಂಗಳೂರು, ದಿನಾಂಕ:03 ನೇ ಜೂನ್ 2021

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಎಂಡೋಸಲ್ಫಾನ್ ಸಂತ್ರಸ್ಥರಿಗೆ ಹಾಲಿ ನೀಡಲಾಗುತ್ತಿರುವ ಮಿತವೇತವನ್ನು ದಿನಾಂಕ: 01/05/2021 ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಹೆಚ್ಚಿಸಿ ಆದೇಶಿಸಿದೆ.

| ಕ್ರ.ಸಂ. | ಅಂಗವಿಕಲತೆಯ ಪ್ರಮಾಣ | ಹಾಲಿ ನೀಡುತ್ತಿರುವ ಮಿತವೇತನ | ಹೆಚ್ಚಿಸಲಾದ ಮಿತವೇತನ |
|---|---|---|---|
| 1. | ಶೇ.25 ರಿಂದ ಶೇ.59 ರಷ್ಟು | ರೂ.1500/- | ರೂ.2000/- |
| 2. | ಶೇ.60 ಹಾಗೂ ಮೇಲ್ಪಟ್ಟು | ರೂ.3000/- | ರೂ.4000/- |

ಈ ಬಾಬ್ತಿನ ವೆಚ್ಚವನ್ನು 2021-22ನೇ ಸಾಲಿನ ಲೆಕ್ಕ ಶೀರ್ಷಿಕೆ : 2235-60-102-1-05-116 ರಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

03/06/2021

....2

ಈ ಯೋಜನೆಯಡಿ ದಕ್ಷಿಣ ಕನ್ನಡ, ಉಡುಪಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಜಿಲ್ಲಾ ಖಜಾನಾಧಿಕಾರಿಗಳು ಮಿತವೇತನ ವಿತರಣಾಧಿಕಾರಿಯಾಗಿದ್ದು, ಸೂಕ್ತ ಕ್ರಮವಹಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ/248/ವೆಚ್ಚ-7/2021 ದಿ: 03/05/2021ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

03/06/2021
(ಜಯಲಕ್ಷ್ಮಿ)
ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ(ಸೇವೆಗಳು-3,ಕೆ.ಎ.ಟಿ,ಬಾನಿ,
ಭೂ.ಸು.ಕೋ ಮತ್ತು ಸಾ.ಭ & ಪಿಂಚಣಿ)

ಪ್ರತಿಯನ್ನು:

3/6/21

1. ಮಹಾಲೇಖಪಾಲರು, (ಲೆಕ್ಕಪತ್ರ ಮತ್ತು ಲೆಕ್ಕ ತಪಾಸಣೆ), ಕರ್ನಾಟಕ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಬೆಂಗಳೂರು.
4. ಆಯುಕ್ತರು, ಖಜಾನೆ ಆಯುಕ್ತಾಲಯ, ಬೆಂಗಳೂರು.
5. ಸರ್ಕಾರದ ಕಾರ್ಯದರ್ಶಿಗಳು, (ಆಯವ್ಯಯ ಮತ್ತು ಸಂಪನ್ಮೂಲ), ವಿಧಾನಸೌಧ, ಬೆಂಗಳೂರು.
6. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ, ಉಡುಪಿ ಹಾಗೂ ಉತ್ತರಕನ್ನಡ
7. ಜಿಲ್ಲಾ ಖಜಾನಾಧಿಕಾರಿಗಳು, ದಕ್ಷಿಣ ಕನ್ನಡ, ಉಡುಪಿ ಹಾಗೂ ಉತ್ತರಕನ್ನಡ
8. ಉಪ ವಿಭಾಗಾಧಿಕಾರಿಗಳು/ ತಹಶೀಲ್ದಾರರು,ದಕ್ಷಿಣ ಕನ್ನಡ, ಉಡುಪಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳು.
9. ಶಾಖಾ ರಕ್ಷಾಕಡತ ಮತ್ತು ಹೆಚ್ಚುವರಿ ಪ್ರತಿ.

